"ತಮ್ಮ ಸಣ್ಣ ವಯಸ್ಸಿನಲ್ಲಿಯೇ ದೊಡ್ಡ ಆಸೆಯನ್ನು ಹುಟ್ಟಿಸಿದ ಲೇಖಕರಲ್ಲಿ ಶ್ರೀ. ಕುಲಕರ್ಣಿಯವರೂ ಒಬ್ಬರು. "ನಾನು ಕಂಡ ಗೌರಮ್ಮ" ಇವರ ಹೆಸರನ್ನು ಕೂಗಿ ನಿಲ್ಲಿಸಿತು.ಅಲ್ಲಿಯ ದೃಷ್ಟಿ, ಮಾತು, ವಸ್ತುವಿನ್ಯಾಸದ ರೀತಿ, ಆ ಆತ್ಮೀಯತೆ—ಎಲ್ಲದೂ ಕನ್ನಡಕ್ಕೆ ಹೊಸದೆಂದು ತೋರಿತು. ಅದೇ ನವೀನತೆ ಇವರ 'ಹಕ್ಕಿ ನೋಟ'ದಲ್ಲಿಯೂ ಹರಿಯಿತು. ಈ ನೆಲೆಯಿಂದ ಅನೇಕ ಕಾರಂಜಿಗಳು ಚಿಮ್ಮಬೇಕೆಂದು ಹಂಬಲಿಸಿದ್ದ ಇವರ ಸ್ನೇಹವರ್ಗಕ್ಕೆ 'ಹಾಸು-ಹೊಕ್ಕು' ಒಂದು ಅಪೂರ್ವ ರಸದೂಟವಾಯಿತೆನ್ನಬಹುದು. ಅಲ್ಲಿ ರೇಖಿತವಾಗಿರುವ ದಾಂಪತ್ಯದ ಮಧುರ ಚಿತ್ರಗಳು ಜೀವನದ ತಂತಿಯನ್ನು ಮೀಟಿದಂತೆ ನಾದಮಯವಾಗಿ ಮೈತುಂಬಿಕೊಂಡು ಬಂದಿವೆ.

"ಇವರಿಗೆ ಜೀವನವನ್ನು ನೋಡುವ ದೃಷ್ಟಿಯಿದೆ; ಆಳವಾದ ಲೋಕಾನುಭವದ ವಿಪುಲ ಸಂಗ್ರಹವಿದೆ; ಸೂಕ್ಷ್ಮ ಮನೋವ್ಯಾಪಾರಗಳ ತೆರೆಯನ್ನು ತೆರೆದು ಅಂತರಂಗವನ್ನು ಸೆಳೆದುಕೊಳ್ಳುವ ಲೋಹಚುಂಬಕ ಶಕ್ತಿ ಇದೆ; ಎಲ್ಲಕ್ಕೂ ಮಿಗಿಲಾಗಿ ಭಾವನೆಗೆ ತಕ್ಕಂತೆ ಭಾಷೆಯನ್ನು ಮೇಣದಂತೆ ಹದಮಾಡಿ . ಯಾವ ಮಾಟಕ್ಕಾದರೂ ತಿರುಗಿಸಿಕೊಳ್ಳುವ ಐಂದ್ರಜಾಲಿಕ ವಿದ್ಯೆಯೂ ಇದೆ. ಇಂಥವರೇಕೆ ಕಾದಂಬರೀ ರಚನೆಗೆ ಕೈಹಾಕಬಾರದು ? ಅದು, ಅನೇಕ ಜನ, ಅನೇಕ ದಿನಗಳಿಂದ ತಮ್ಮೊಳಗೇ ಕೇಳಿಕೊಂಡ ಪ್ರಶ್ನೆ; ಗ್ರಂಥಕರ್ತರಿಗೂ ಹಾಕಿದ ಪ್ರಶ್ನೆ. ಎಲ್ಲರ ಪ್ರಶ್ನೆಗೆ ಪರಿಹಾರವೆನ್ನುವಂತೆ ದತ್ತಾತ್ರೇಯ ಅವರು 'ಪರಿಹಾರ' ಕಾದಂಬರಿಯೊಡನೆ ಕನ್ನಡಿಗರೆದುರು ನಿಂತಿದ್ದಾರೆ."

— ಪಾಟೀಲ ಪುಟ್ಟಪ್ಪ
(ಅವತಾರಿಕೆಯಿಂದ)

ಲಲಿತ ಸಾಹಿತ್ಯಮಾಲೆಯ ಮೂವತ್ತೊ[illegible]ನೆಯ ಕುಡಿ
ಏಳನೆಯ ವರುಷದ ಅಯ್ದನೆಯ ಪ್ರಕಟನ



# ಪರಿಹಾರ

## ಕಾದಂಬರಿ

ದತ್ತಾತ್ರೇಯ ಕುಲಕರಣಿ

ಲಲಿತ ಸಾಹಿತ್ಯಮಾಲೆ
ಧಾರವಾಡ

| ಉತ್ತಮ ಪ್ರತಿ | | ಸಾದಾ ಪ್ರತಿ |
|---|---|---|
| ೨-೧೨-೦ | ಎಪ್ರಿಲ್ ೧೯೫೨ | ೨-೦-೦ |

ಸಂಪಾದಕರು-ಪ್ರಕಾಶಕರು :
**ಚುಳಕಿ ಗೋವಿಂದರಾಯರು**
ಲಲಿತ ಸಾಹಿತ್ಯಮಾಲೆ, ಧಾರವಾಡ

**ಇದೇ ಲೇಖಕರಿಂದ**

**ಹಕ್ಕಿನೋಟ** ವ್ಯಕ್ತಿಚಿತ್ರಗಳ ಸಂಗ್ರಹ

**ಹಾಸು-ಹೊಕ್ಕು** ಹತ್ತು ಸಂಕಥನಗಳು

ಮಾರಾಟಗಾರರು :
**ಮನೋಹರ ಗ್ರಂಥ ಭಾಂಡಾರ ಧಾರವಾಡ**
**ಕನ್ನಡ ಪುಸ್ತಕಾಲಯ ಬೆಳಗಾವಿ**

ಮುದ್ರಕರು :
**ಎಸ್. ಎಮ್. ಕುಲಕರ್ಣಿ**
ಲಲಿತ ಮುದ್ರಣಾಲಯ ಧಾರವಾಡ

# ಅರಿಕೆ

ಲಲಿತ ಸಾಹಿತ್ಯಮಾಲೆ ತನ್ನ ಏಳನೆಯ ವರುಷದಲ್ಲಿ ಕೊನೆಯದಾಗಿ ಈ 'ಪರಿಹಾರ'ವೆಂಬ ಕಾದಂಬರಿಯನ್ನು ತನ್ನ ಚಂದಾದಾರರಿಗೆ ನೀಡುತ್ತಲಿದೆ.

ಮಾಲೆ ಹುಟ್ಟಿ ಹತ್ತುವರ್ಷಗಳೇ ಸಂದಿವೆ. ಯುದ್ಧ ಕಾಲದಲ್ಲಿಯೇ ಮೊದಲಾಗಿ ಮುಂದೆ ಸುಕರವಲ್ಲದ ಕಾಲವಾದರೂ ಕಾಲೆಳೆದುಕೊಂಡು ನಡೆದು ಇಲ್ಲಿಗೆ ಮೂವತ್ಮೂರು ಪುಸ್ತಕಗಳನ್ನು ಪ್ರಕಟಿಸಿದ್ದೇ ಸಾಹಸದ ಮಾತಾಗಿದೆ.

ಹೌದು; ಈಗ ಪುಸ್ತಕಗಳನ್ನು ಪ್ರಕಟಿಸುವದು ಸಾಹಸವೇ. ಚಂದಾದಾರರ ಸಂಖ್ಯೆ ತೀರ ಪರಿಮಿತವಾಗಿದ್ದು ಬಿಡಿ ಪುಸ್ತಕಗಳ ಮಾರಾಟಕ್ಕೆ ರಭಸವಿಲ್ಲದಾಗ, — ಕಾಗದ, ಮುದ್ರಣ, ಅಂಚೆಯ ದರ — ಸೌಕರ್ಯಗಳು ಏರಿ ನಿಂತಾಗ ವ್ಯಾವಹಾರಿಕವಾಗಿ ಲಾಭಕಾಣದ ಈ ವ್ಯಾಪಾರ ಸಾಹಸವಲ್ಲದೆ ಮತ್ತೇನು ?

ಹಾಗೆಂದರೂ ನಮ್ಮ ಪ್ರಕಟನೆಗಳಿಗೆ ಪೇಟೆಯಿಲ್ಲವೆಂದಲ್ಲ. ಹತ್ತು ಪುಸ್ತಕಗಳಾಗಲೆ ಎರಡು-ಮೂರು ಆವೃತ್ತಿಗಳನ್ನು ಕಂಡಿವೆ. ಇನ್ನು ಹತ್ತು ಪುನರ್ಮುದ್ರಣಕ್ಕೆ ಬಂದು ನಿಂತಿದ್ದರೂ ಸಾಹಸಕ್ಕೆ ನಿಲುಕದ ಯೋಜನೆಯಲ್ಲಿವೆ.

ಚಂದಾದಾರರಸಂಪತ್ತಿ ಸ್ವಲ್ಪ ಹೆಚ್ಚಿ, ಮಾರಾಟ ಕುದುರದೆ ನಿಯಮಿತತನ ಕಾಪಾಡಿಕೊಳ್ಳುವದೂ, ಓದುಗರ ನೆರವು ನೀರಡಿಕೆಗಳು ಹೆಚ್ಚದೆ ಕೊಡುವ ಸಾಹಿತ್ಯದ ಅಂತರ್ಬಾಹ್ಯ ಸೌಂದರ್ಯ-ಗುಣಗಳನ್ನು ಹೆಚ್ಚಿಸುವದೂ ಸುಲಭ ಸಾಧ್ಯವಾಗುದಿಲ್ಲ.

ಆದರೆ ನಮ್ಮ ಕೆಲಸ ನಾವು ಶ್ರದ್ಧೆವಹಿಸಿ ಮಾಡುತ್ತ ಬಂದಾಗ ಕನ್ನಡ ಜನತೆ ನಮ್ಮನ್ನು ಕೈ ಹಿಡಿದು ನಡೆಸುತ್ತಾರೆಂಬ ಭರವಸೆ ನಮಗೆ ಖಚಿತವಾಗಿ ಇದೆ.

ಮುಂದಿನ ( ಎಂಟನೆಯ ) ವರುಷದಲ್ಲಿ ಎರಡು ಉತ್ತಮ ಸ್ವತಂತ್ರ ಕಾದಂಬರಿಗಳನ್ನು, ಮತ್ತೆ ಎರಡು-ಮೂರು ನವೀನ ರುಚಿಯ ಸಾಹಿತ್ಯ ಕೃತಿಗಳನ್ನು ನೀಡುವದಾಗಿ ಸಾರ ಬಯಸುತ್ತೇವೆ.

ನಮ್ಮ ಜನತೆ ಎಂದಿನಂತೆ—ಸ್ವಲ್ಪಧಾರಾಳವಾದರೂ ಅಡ್ಡಿಯಿಲ್ಲ—ನಮ್ಮ ಪ್ರಕಟನೆಗಳನ್ನು ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸಿದ್ದೇವೆ.

ಧಾರವಾಡ
೧೧-೪-೫೨

**ಚುಳಕಿ ಗೋವಿಂದರಾಯ**
ಸಂಪಾದಕ

**ಲಲಿತ ಸಾಹಿತ್ಯಮಾಲೆ**
**ಎಂಟನೆಯ ವರುಷದಲ್ಲಿ**
**ಪ್ರಕಟವಾಗಲಿರುವ ಪುಸ್ತಕಗಳು**

## ಹೂವಿನ ಹುಡುಗಿ

ಕಿರುಕಾದಂಬರಿ

ಮೂಲ : **ಶ್ರೀ. ಕೂಡಲಿ ನರಸಿಂಹರಾವಲು**
ಅನುವಾದ : **ಶ್ರೀ. ರಂಗರಾವ ದೇಸಾಯಿ**
ಪರಿಷ್ಕಾರ : **ಶ್ರೀ. ಸಿಂಪಿ ಲಿಂಗಣ್ಣ**

## ಅನುರಕ್ತೆ

**ಶ್ರೀ. ವ್ಯಾಸರಾಯ ಬಲ್ಲಾಳರ ಕಾದಂಬರಿ**

## ಈಪರಿಯ ಸೊಬಗು

**ಶ್ರೀ. ವಿ. ಎಂ. ಇನಾಮದಾರರ ಕಾದಂಬರಿ**

# ಅ ವ ತಾ ರಿ ಕೆ

ಒಬ್ಬ ಕವಿ ಅವತರಿಸುವ ಮೊದಲು ನೂರುಜನ ಅಳಿಗವಿಗಳು ಅವತಾರ ಎತ್ತಿಬರಬೇಕು ಎಂದು ಹೇಳುತ್ತಾರೆ. ಅದರಂತೆಯೇ ಒಂದು ಕಾದಂಬರಿ ಅವತರಿಸುವ ಮೊದಲು ಹತ್ತು ಸಣ್ಣಕಥೆ ಬರೆದು ಅನುಭವವಾಗ ಬೇಕು ಎಂದು ಹೇಳುವುದು ಸ್ವಾಭಾವಿಕವೇ ಆಗಿದೆ. ಅಭ್ಯಾಸಬಲದಿಂದ ಬರುವ ಆ ಅನುಭವವು ಕಾದಂಬರಿಯ ರಸಸಿದ್ಧಿಗೆ ಮಾರ್ಗದರ್ಶಕ ಶಕ್ತಿಯಾಗಿ ನಿಂತು ಕಲೆಯಕುಂಚವನ್ನು ನಿರರ್ಗಳವಾಗಿ ಮುನ್ನಡೆಸುತ್ತದೆ. ಕಾದಂಬರಿಯ ರಸಸಿದ್ಧಿಯನ್ನು ಕುರಿತು ಹೇಳಬಹುದಾದ ಸೂತ್ರ, ಸೂಚನೆ, ವಿವರಣೆಗೆ ಸುಲಭಸಾಧ್ಯವೆನಿಸಿದರೂ ಕಾದಂಬರಿಯ ರಚನೆಗೆ ಸಮೀಪದ ಸುಲಭ ದಾರಿಗಳಿಲ್ಲ.

ಶ್ರೀ. ದತ್ತಾತ್ರೇಯ ಕುಲಕರ್ಣಿ ಅವರು, ಪರಿಣಿತರಷ್ಟೇ ಸಹಜತೆ ಯಿಂದ, ಕಾದಂಬರಿಯ ಈ ಅಪರಿಚಿತ ಕ್ಷೇತ್ರದಲ್ಲಿ ಹಿರಿಯ ಅಧಿಕಾರ ದಿಂದಲೇ ಅಡಿಯಿರಿಸಿದ್ದಾರೆ. ಆರಂಭದ ಕತೆಗಳನ್ನು ಸಿಕ್ಕಂತೆ ಎಳೆದು, ವಿಕಾರಗೊಳಿಸಿ, ಹರಿದು, ಚೆಲ್ಲಿ, ಪುನಃ ಹೆಣೆದು, ಬಿಡಿಸಿ, ವಕ್ರ ವಿನ್ಯಾಸ ಮಾಡಿ, ಕೊನೆಗೆ ಎಲ್ಲವನ್ನೂ ತಾರುಮಾರುಗೊಳಿಸಿ, ಗಾಳಿಯಲ್ಲಿ ತೂರಿ ಬಿಡುವ ಸಂಪೂರ್ಣ ಸ್ವಾತಂತ್ರ್ಯವಿದ್ದಾಗಲೂ ಕೂಡ, ಇವರು ಅವುಗಳನ್ನೆಲ್ಲ, ಕುಶಲ ಕತೆಗಾರನಂತೆ ಕಲೆಯ ಮೆರಗು ಕೊಟ್ಟು, ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. ಇವರ ‘ ಹಾಸು-ಹೊಕ್ಕು ’ ಉತ್ತಮ ಕತೆಗಾರಿಕೆಯ ಶ್ರೇಷ್ಠ ನಿದರ್ಶನವಾಗಿದೆ. ವಧೆ ಮಾಡುವ ಸ್ವೇಚ್ಛೆಯಿದ್ದಾಗಲೂ ಕೂಡ ಬದುಕು ವಂಥ ಕೃತಿಗಳನ್ನೇ ಇವರು ಬರೆದಿರುವರೆಂದಾಗ ಕಾದಂಬರಿಯ ರಂಗಕ್ಕೆ ಪ್ರವೇಶಮಾಡುವ ಅಧಿಕಾರ ಇವರಿಗೆ ಸ್ವಾರ್ಜಿತವಾಗಿಯೇ ಲಭಿಸಿದೆ.

ತಮ್ಮ ಸಣ್ಣ ವಯಸ್ಸಿನಲ್ಲಿಯೇ ದೊಡ್ಡ ಆಸೆಯನ್ನು ಹುಟ್ಟಿಸಿದ ಲೇಖಕರಲ್ಲಿ ಶ್ರೀ. ಕುಲಕರ್ಣಿಯವರೂ ಒಬ್ಬರು. “ನಾನು ಕಂಡ ಗೌರಮ್ಮ” ಇವರ ಹೆಸರನ್ನು ಕೂಗಿ ನಿಲ್ಲಿಸಿತು.ಅಲ್ಲಿಯ ದೃಷ್ಟಿ, ಮಾತು, ವಸ್ತುವಿನ್ಯಾಸದ

ರೀತಿ, ಆ ಆತ್ಮೀಯತೆ—ಎಲ್ಲದೂ ಕನ್ನಡಕ್ಕೆ ಹೊಸದೆಂದು ತೋರಿತು. ಅದೇ ನವೀನತೆ ಇವರ ' ಹಕ್ಕಿ ನೋಟ 'ದಲ್ಲಿಯೂ ಹರಿಯಿತು. ಈ ಸೆಲೆ ಯಿಂದ ಅನೇಕ ಕಾರಂಜಿಗಳು ಚಿಮ್ಮಬೇಕೆಂದು ಹಂಬಲಿಸಿದ್ದ ಇವರ ಸ್ನೇಹ ವರ್ಗಕ್ಕೆ ' ಹಾಸು-ಹೊಕ್ಕು ' ಒಂದು ಅಪೂರ್ವ ರಸದೂಟವಾಯಿತೆನ್ನ ಬಹುದು. ಅಲ್ಲಿ ರೇಖಿತವಾಗಿರುವ ದಾಂಪತ್ಯದ ಮಧುರ ಚಿತ್ರಗಳು ಜೀವನದ ತಂತಿಯನ್ನು ಮಿಡಿದಂತೆ ನಾದಮಯವಾಗಿ ಮೈತುಂಬಿಕೊಂಡು ಬಂದಿವೆ.

ಇವರಿಗೆ ಜೀವನವನ್ನು ನೋಡುವ ದೃಷ್ಟಿಯಿದೆ; ಆಳವಾದ ಲೋಕಾ ನುಭವದ ವಿಪುಲ ಸಂಗ್ರಹವಿದೆ; ಸೂಕ್ಷ್ಮ ಮನೋವ್ಯಾಪಾರಗಳ ತೆರೆಯನ್ನು ತೆರೆದು ಅಂತರಂಗವನ್ನು ಸೆಳೆದುಕೊಳ್ಳುವ ಲೋಹಚುಂಬಕ ಶಕ್ತಿ ಇದೆ; ಎಲ್ಲಕ್ಕೂ ಮಿಗಿಲಾಗಿ ಭಾವನೆಗೆ ತಕ್ಕಂತೆ ಭಾಷೆಯನ್ನು ಮೇಣದಂತೆ ಹದ ಮಾಡಿ ಯಾವ ಮಾಟಕ್ಕಾದರೂ ತಿರುಗಿಸಿಕೊಳ್ಳುವ ಐಂದ್ರಜಾಲಿಕ ವಿದ್ಯೆಯೂ ಇದೆ. ಇಂಥವರೇಕೆ ಕಾದಂಬರೀ ರಚನೆಗೆ ಕೈಹಾಕಬಾರದು ? ಅದು, ಅನೇಕ ಜನ, ಅನೇಕ ದಿನಗಳಿಂದ ತಮ್ಮೊಳಗೇ ಕೇಳಿಕೊಂಡ ಪ್ರಶ್ನೆ; ಗ್ರಂಥಕರ್ತರಿಗೂ ಹಾಕಿದ ಪ್ರಶ್ನೆ. ಎಲ್ಲರ ಪ್ರಶ್ನೆಗೆ ಪರಿಹಾರವೆನ್ನುವಂತೆ ದತ್ತಾತ್ರೇಯ ಅವರು ' ಪರಿಹಾರ ' ಕಾದಂಬರಿಯೊಡನೆ ಕನ್ನಡಿಗರೆದುರು ನಿಂತಿದ್ದಾರೆ. ಮಾತಿನ ಹದವನ್ನೂ ವಿಷಯಸಂಪತ್ತನ್ನೂ ಪಡೆದಿರತಕ್ಕವನು ಕತೆಯನ್ನಾದರೂ ಬರೆಯಬಹುದು; ಕಾದಂಬರಿಯನ್ನಾದರೂ ಬರೆಯ ಬಹುದು. ಯಾವ ಹೂವಾದರೇನು—ಸುವಾಸನೆಯಿದ್ದರೆ ಸಾಲದೇನು ?

ಪರಿಭಾವೀ ಸ್ವಭಾವದ ಓದುಗರಲ್ಲಿ, ಕನ್ನಡ ಕಾದಂಬರಿ ಪ್ರಪಂಚದ ಒಟ್ಟಿನ ದೃಷ್ಟಿ ಧೋರಣೆ ಆಳ ವಿಸ್ತಾರಗಳನ್ನು ಕುರಿತು ಒಂದು ವಿಧವಾದ ಅತೃಪ್ತಿ ತಲೆದೋರಿದೆ. ಅಂತರ್ ದೇಶೀಯ ಹಾಗೂ ರಾಷ್ಟ್ರಾಂತರದ (International) ಸಾಹಿತ್ಯವನ್ನು ಸಮೀಕ್ಷಿಸುವವರಿಗೆ ನಮ್ಮ ಅಂತರ್ ಪ್ರಾಂತೀಯ ಕಥೆ ಕಾದಂಬರಿಗಳಲ್ಲಿ ಜೀವನದ ಸಮಸ್ಯೆಗಳನ್ನು ಕೆಣಕುವ ಛಲ, ಪ್ರಭಾವಶಾಲಿಯಾಗಿ ಎದ್ದು ತೋರುವುದಿಲ್ಲ. ಅನೇಕ ಲೇಖಕರಿಗೆ ಪ್ರಪಂಚವನ್ನು ಎದುರಿಸುವ ಪೌರುಷಕ್ಕಿಂತ ಪಲಾಯನವೇ ಹೆಚ್ಚು ಪ್ರಿಯ ವೆನಿಸಿದೆ. ಜೀವನದ ವಾಸ್ತವತೆ ಸಾಹಿತ್ಯದಲ್ಲಿ ಮೂಡಿಬರಲೊಲ್ಲದಾಗಿದೆ. ಹೊಸಕಾಲದ ಪ್ರಜ್ಞೆ ನಮ್ಮ ಲೇಖಕರಲ್ಲಿ ಉಂಟಾಗದೆ ನೂತನ ಸಾಹಿತ್ಯ

ನಿರ್ಮಾಣವಾಗಲಾರದು. ಈ ಮಾತಿಗೆ ವೈಭವಶಾಲಿಯಾದ ಅಪವಾದಗಳು ಇಲ್ಲದೆ ಇಲ್ಲ. ಆದರೆ ನೀರಡಿಸಿದವರಿಗೆ ಈ ತೊಟಕು ನೀರು ಯಾವ ತೃಪ್ತಿಯನ್ನು ಕೊಡಬಲ್ಲದು ?

ಕನ್ನಡ ಕಾದಂಬರಿ ಪ್ರಪಂಚದಲ್ಲಿ ತಲೆಯೆತ್ತಿರುವ ಸಮಸ್ಯೆಗಳಿಗೆಲ್ಲ ಶ್ರೀ. ಕುಲಕರ್ಣಿಯವರ ಕಾದಂಬರಿ ಸೂಕ್ತ ಪರಿಹಾರವೇ ಎಂದು ಇಲ್ಲಿ ವಿಚಾರಿಸುವುದು ತುಂಬ ದೊಡ್ಡ ಪ್ರಶ್ನೆಯಾದೀತು. ಅದು ಈ ಅವತಾರಿಕೆಯ ಕಾರ್ಯಕ್ಷೇತ್ರವೂ ಅಲ್ಲ. ಎಲ್ಲ ಸಮಸ್ಯೆಗಳಿಗೆ ಯಾವ ಬ್ರಹಸ್ಪತಿಯೂ ಉತ್ತರ ಹೇಳಲಾರ; ಅಲ್ಲದೆ, ಎಲ್ಲ ಸಮಸ್ಯೆಗಳಿಗೆ ಒಂದೇ ಉತ್ತರ, ಉತ್ತರವೂ ಆಗಲಾರದು. ಲೋಕದ ಬದುಕನ್ನು ಚಿರಂತನವೂ ಕೆಣಕುವಂಥ ಗಂಡು ಹೆಣ್ಣಿನ ಸಂಬಂಧದ ಮಧುರಕೌತುಕದ ಪ್ರಶ್ನೆಯನ್ನೇ ಇವರು, ಎಲ್ಲರಂತೆ, ತಮ್ಮ ಕಾದಂಬರಿಯ ವಸ್ತುವಾಗಿ ಆಯ್ದುಕೊಂಡಿದ್ದಾರೆ. ಆದರೆ ಇವರ ಚಿತ್ರಣದ ರೀತಿ ಎಲ್ಲರಂತೆ ಅಲ್ಲವೆಂಬುದನ್ನು ಸೂಕ್ಷ್ಮಗ್ರಾಹಿಗಳಾದ ಓದುಗರು ಕಂಡುಕೊಳ್ಳಬಲ್ಲರು.

ಸಾಮಾನ್ಯವಾಗಿ ನಾವು ನಮ್ಮ ಎಡಬಲಗಳಲ್ಲಿ ಕಾಣಬಹುದಾದ ಒಂದು ಮಧ್ಯಮ ತರಗತಿಯ ಸಂಸಾರದ ದೈನಂದಿನ ಜೀವನದ ಸರಸ ವಿರಸಗಳನ್ನು ಲೇಖಕರು ಇಲ್ಲಿಯ ಕಥಾವಾಹಿನಿಯಲ್ಲಿ ತೇಲಿಬಿಟ್ಟಿದ್ದಾರೆ. ಅಬ್ಬರ ಅವಾಂತರಗಳ ಕಲಕಲಾಟವಿಲ್ಲದೆ ಕಾದಂಬರಿಯ ತೆರೆಯೇಳುತ್ತದೆ. ಸದ್ದು ಸಪ್ಪಳಗಳಿಲ್ಲದೆ ಬಯಲಿನಲ್ಲಿ ಹರಿಯುವ ನದಿಯಂತೆ ಕಥೆ ಪ್ರಶಾಂತವಾಗಿ ಹರಿಯುತ್ತದೆ. ಇಲ್ಲಿ ಬರುವ ವ್ಯಕ್ತಿಗಳು ಯಾರಿಗೇನೂ ಅಪರಿಚಿತರಲ್ಲ; ಅಂಥವರನ್ನು ನಾವು ನಿತ್ಯ ಜೀವನದಲ್ಲಿ ಕಂಡೇ ಕಾಣುತ್ತೇವೆ. ಕಮಲಾ, ಪ್ರಭಾ, ಕುಸುಮಕ್ಕ, ಕಾತರಕೀ, ಚಂದ್ರಕಾಂತ, ವೆಂಕಟರಾವ್—ಎಲ್ಲ ಜನ ನಮ್ಮ ಸುತ್ತಲೂ ತುಂಬಿದ್ದಾರೆ. ಮಾನಸಿಕ ನರಳಿಕೆಯಿಂದ ಕೊರಗುತ್ತಿರುವ ನಮ್ಮ ಅಸಂಖ್ಯಾತ ಯುವಕರಲ್ಲಿ ಕಥಾನಾಯಕ ದಿನಕರನೂ ಒಬ್ಬನೆನಿಸಿದ್ದಾನೆ. ‘ ಹಿಡಿಯಲೋ, ಬಿಡಲೊ ’ ಎನ್ನುವ ಮಾನಸಿಕ ದೌರ್ಬಲ್ಯದ ಹ್ಯಾಮ್ಲೆಟ್ ಪರಂಪರೆ ಯುವಕರಲ್ಲಿ ಪ್ರಬಲವಾಗಿ ಬೆಳೆದುಕೊಂಡು ಬರಲಾರಂಭಿಸಿದೆ ಎನ್ನುವ ಟೀಕೆಯ ಒಂದು ಮುಖವಾಗಿ ದಿನಕರ ಇಲ್ಲಿ ಮೂಡಿದ್ದಾನೆ. ಈ ಕಾದಂಬರಿಯಲ್ಲಿ ಕಲಹವಿಲ್ಲ; ಖಳನಾಯಕನಿಲ್ಲ; ಉದ್ವೇಗವಿಲ್ಲ; ಅನ್ನದ ಸಮಸ್ಯೆಯಿಲ್ಲ;

ಪರಿಸ್ಥಿತಿಯ ಒತ್ತಡವಿಲ್ಲ; ದುರ್ಭರ ಪ್ರಸಂಗ ಎದುರು ಬಂದಿತು ಎನ್ನುವ ಪ್ರಶ್ನೆಯಿಲ್ಲ.

ಹಾಗಾದರೆ ಈ ಕಾದಂಬರಿಯ ವೈಶಿಷ್ಟ್ಯವೇನು ? ಇದರ ಕೇಂದ್ರ ಆಕರ್ಷಕ ಶಕ್ತಿ ಯಾವುದು ? ದಿನಕರನ ದೌರ್ಬಲ್ಯವೇ ಈ ಕಾದಂಬರಿಯ ಹಂದರ; ಕೃಷ್ಣೆಯ ವಿದ್ಯುತ್-ವ್ಯಕ್ತಿತ್ವವೇ ಈ ಕಥೆಯ ಜೀವಾಳ. ಕೃಷ್ಣೆಯ ಪಾತ್ರರಚನೆಯಲ್ಲಿ ಕಾದಂಬರಿಕಾರರು ಅದ್ಭುತ ಕೌಶಲವನ್ನು ತೋರಿಸಿದ್ದಾರೆ. ಈ ಕಥೆಯ ಚಲನೆ ಹಾಗೂ ಚಲಿಸುವ ಶಕ್ತಿ ಎಲ್ಲ ಅವಳೇ. ಕಥೆಗೆ ನಾಯಕ ದಿನಕರನಾದರೂ ಅಗ್ರಪಟ್ಟ ಕೃಷ್ಣೆಯದೇ. ದಿನಕರನಿಗೆ ಈಸುವ ಎದೆಗಾರಿಕೆ ಯಿಲ್ಲ; ಗಂಡನಾದರೂ ಅವನು ತೇಲಿಕೊಂಡೇ ಹೋದಾನು. ಕೃಷ್ಣಾ ಹೆಣ್ಣಾದ ರೇನಂತೆ ? ಈಸತಕ್ಕ ಶಕ್ತಿಯೂ ಇದೆ; ಅವಳಲ್ಲಿ ಜಯಿಸತಕ್ಕ ಶಕ್ತಿಯೂ ಇದೆ. ಸಕಲವನ್ನೂ ಅವಳು ತನ್ನ ಅಂತಃಕರಣದಿಂದಲೇ ಗೆಲ್ಲುತ್ತಾಳೆ. ನರಳು ತ್ತಿರುವ ಪ್ರಪಂಚಕ್ಕೆ ಹೆಣ್ಣಿನ ಆರೈಕೆ ಬೇಕೆಂದು ಕವಿವರ ಠಾಕೂರರು ಹೇಳು ತ್ತಾರೆ. ಅಂಥ ಆರೈಕೆಯನ್ನು ಕೃಷ್ಣಾನಂಥ ಹೆಣ್ಣು ಕೊಡಬಲ್ಲಳು. ಅವಳಲ್ಲಿ ಕನ್ಯೆಯ ಪ್ರೇಮವಿದೆ; ತಾಯಿಯ ವಾತ್ಸಲ್ಯವಿದೆ. ಲೋಕವ್ಯವಹಾರವನ್ನೂ ಅರಿತವಳು; ಅವಳು, ಬದುಕುವ ತತ್ವವನ್ನೂ ತಿಳಿದವಳು. ತನ್ನ ತ್ಯಾಗ ಪ್ರೀತಿ ಕರುಣೆಯಿಂದ ಕೃಷ್ಣಾ ಚಿರಂತನವಾಗಿ ನಿಲ್ಲತಕ್ಕವಳು. ಆಕೆ ಶರಚ್ಚಂದ್ರರ ಬಡೀ ದೀದಿಯನ್ನು ನೆನಪಿಗೆ ತರತಕ್ಕ ವ್ಯಕ್ತಿಯಾಗಿದ್ದಾಳೆ.

ಈ ಕಾದಂಬರಿಯಲ್ಲಿ ಮಾನಸಿಕ ವಿಶ್ಲೇಷಣೆಗೆ ವಿಶೇಷ ಪ್ರಾಧಾನ್ಯ ಕೊಡಲಾಗಿದೆ. ಕಥೆಯುದ್ದಕ್ಕೂ ಅದು ಗುಪ್ತಗಾಮಿನಿಯಾಗಿ ಕಂಡು ಕೊನೆ ಯಲ್ಲಿ ಚಿತ್ರಪೂರ್ಣವಾಗಿ ಆವಿರ್ಭವಿಸಿ ನಿಂತಿದೆ. ದಿನಕರನಿನ್ನೂ ಪೂರ್ವಾ ಶ್ರಮದಲ್ಲಿರುವಾಗ, ಕೃಷ್ಣಾ, ಮೆಲ್ಲಗೆ ಸುಳಿದು ಬಂದು ಅವನ ಹೃದಯವನ್ನು ಸೂರೆಗೊಂಡು ಹೋಗುತ್ತಾಳೆ. ಅವಳಿಗೆ ಅದೇ ಆಗ ಮದುವೆಯಾಗಿ ಗೃಹಿಣೀ ಪದ ಪ್ರಾಪ್ತವಾಗಿತ್ತು. ಸಂಸಾರ ಸುಖದ ಸವಿಯನ್ನು ಕಾಣದೆ ಅವಳ ಮನಸ್ಸು ವಿಭ್ರಮಿಸಿಹೋಗಿತ್ತು. ದಿನಕರನ ಸ್ನೇಹದಲ್ಲಿ ಅವಳು ಮತ್ತೆ ನವ ಜೀವನವನ್ನು ಕಾಣುವಂತಾಯಿತು. ಅವಳ ಬದುಕು ಶ್ರುತಿಮಾಡಿಟ್ಟ ವೀಣೆ ಯಂತೆ ಸಿಂಗಾರಗೊಂಡು ಶೋಭಿಸಿತು. ಹಳೆಯ ನೆನಹು ಕಾಲವಾಹಿನಿಯಲ್ಲಿ ತೇಲಿಹೋಯಿತು. ದಿನಕರ ಮದುವೆಯಾಗಿ ಗೃಹಸ್ಥನೆನಿಸಿದ. ಕೈಹಿಡಿದ

ಕಮಲೆಯನ್ನು ತೌರಿನಲ್ಲಿ ನಿಲ್ಲಿಸಿದ ಅಗಲಿಕೆ ಕೃಷ್ಣೆಯ ನೆನಹನ್ನು ದಿನಕರನಿಗೆ ತಂದುಕೊಟ್ಟಿತು. ಕಮಲಾ ಮನೆಗೆ ಮರಳಿದಾಗಲೂ ಕೃಷ್ಣೆಯ ನೆನಹು ದಿನ ಕರನ ಮನಸ್ಸಿನಿಂದ ಮರೆಯಾಗಲಿಲ್ಲ. ಅವಳ ಕಥೆಯನ್ನು ಕಮಲೆಗೆ ಹೇಳಿ, ದಿನಕರ, ತನ್ನ ಎದೆಯನ್ನು ಹಗುರುಮಾಡಿಕೊಳ್ಳಬೇಕೆಂದ; ಧೈರ್ಯವಾಗಲಿಲ್ಲ. ಹೇಳಲೋ ಬೇಡವೋ ಎನ್ನುವ ಚಿಂತೆ ಅವನನ್ನು ಪೀಡಿಸಿತು. ದಿನಕರ ಮನಸ್ಸಿನಲ್ಲಿಯೇ ಹಣ್ಣಾದ. ಅನಿರೀಕ್ಷಿತವಾಗಿ, ಕೃಷ್ಣೆ, ಏಕಾಏಕಿ ಹಳೆಯ ನಲಿಗೆಯಿಂದ ಮಾತನಾಡಿಸಿದಾಗ ಅವನು ಕುಸಿದುಹೋದ. ಅದೆಲ್ಲ ಕಮಲೆಯ ಎದುರಿನಲ್ಲಿಯೇ ನಡೆಯಬೇಕೇ ? ತನ್ನ ಬಗ್ಗೆ ಕಮಲೆ ಏನೆಂದು ಕೊಳ್ಳುವಳೋ ? ವಿಚಾರ ಮಾಡಿದಂತೆ ದಿನಕರನ ತಲೆ ವಿಭ್ರಮಿಸಿಹೋಗು ತ್ತದೆ. ತಾನು ಒಂದು ಕಾಲಕ್ಕೆ ಆತನಿಂದ ಪಡೆದ ಜೀವವನ್ನು ಅವನಿಗೊಪ್ಪಿಸಿ, ಕೃಷ್ಣಾ, ಅವನಿಗೆ ಜೀವದಾನ ಮಾಡುತ್ತಾಳೆ. ದಿನಕರನ ಜೀವತಿನ್ನುತ್ತಿದ್ದ ಸಮಸ್ಯೆಗೆ ಕೃಷ್ಣಾನಿಂದ ಬದುಕುವ ಪರಿಹಾರ ದೊರೆಯುತ್ತದೆ. ದಿನಕರ ಕಮಲೆಯರ ಜೀವನ ಮತ್ತೆ ಕುಲುಕುಲು ನಗುವಂತಾಗುತ್ತದೆ.

ಪೂರ್ವಾಶ್ರಮದಲ್ಲಿ ತಾನು ಕೃಷ್ಣೆಯೊಂದಿಗೆ ಕಟ್ಟಿಕೊಂಡ ಸಂಬಂಧ ವನ್ನು ಕುರಿತು ಗೃಹಸ್ಥನಾದ ದಿನಕರ ಆಲೋಚಿಸಬೇಕಾದ ಅಗತ್ಯವೇನಿತ್ತು ಎಂದು ಯಾರಾದರೂ ಪ್ರಶ್ನೆಮಾಡಬಹುದು. ಅವರು ಕೇಳುವಂತೆ ದಿನಕರನಲ್ಲಿ ಆ ಆಲೋಚನೆಯಿಲ್ಲದಿದ್ದರೆ ಕಥೆಗೆ ಅಸ್ತಿತ್ವವೇ ಇರಲಿಲ್ಲ. ಆದರೆ ಈ ಪ್ರಶ್ನೆಯು ಕಣ್ಣಿಗೆ ನಿಲುಕದ ಮಾನವೀಯ ವಿಚಾರವೊಂದಿದೆ. ದಿನಕರನು ಭೀರುವಾಗಿರ ಬಹುದು; ಆದರೆ ದುಷ್ಟನಲ್ಲ. ಅವನು ಎರಡು ಬಗೆಯ ವ್ಯಕ್ತಿತ್ವ ಕಟ್ಟಿಕೊಂಡ ಆತ್ಮದ್ರೋಹಿಯಲ್ಲ; ದ್ವಿಮುಖ ವ್ಯಕ್ತಿಯಲ್ಲ. ಸರ್ವಾರ್ಪಣ ಭಾವನೆಯಿಂದ ತನ್ನೊಂದಿಗೆ ತನ್ನ ನೆರಳಾಗಿ ನಡೆಯುತ್ತಿರುವ ಹೆಂಡತಿಗೆ ತಾನು ಎರಡೆಣಿಸ ಬೇಕೇ ? ಇಬ್ಬರೂ ಒಂದೇ ಜೀವ ಎನ್ನುವ ಭಾವನೆಯಿಂದ ತನ್ನದೆಲ್ಲವನ್ನೂ ಒಪ್ಪಿಸಿದ ಕಮಲೆಗೆ ತಾನು ತನ್ನ ಮನಸ್ಸಿನ ಒಂದು ನಿರಿಗೆಯನ್ನಾದರೂ ಬಿಚ್ಚಿ ತೋರಿಸಬಾರದೇ ? ಮುಚ್ಚುಮರೆ ಮಾಡಿದರೆ ಆಗುವ ಪ್ರಯೋಜನವೇನು ? ಮಾಡದೆ ಬಿಟ್ಟರೆ ಆಗುವ ಅನರ್ಥವೇನು ? ದಿನಕರನ ಹೃದಯ ಜಾಗ್ರತ ವಿತ್ತೆಂತಲೇ ಅವನ ಮನಸ್ಸಿನಲ್ಲಿ ಉಲ್ಲೋಲಕಲ್ಲೋಲ ಉಂಟಾಯಿತು. ತನ್ನ ಮನಸ್ಸಿನಲ್ಲಿ ಕೊಟ್ಟಿಗೆಗಳನ್ನು ಕಟ್ಟಿಕೊಂಡಿದ್ದರೆ, ದಿನಕರ, ಈ ವಿಚಾರ

ಗಳನ್ನು ಕಟ್ಟಿಕೊಂಡು ಇಷ್ಟೊಂದು ಮಿಡುಕಬೇಕಾದುದಿರಲಿಲ್ಲ. ದಿನಕರನ ಬಗೆಗೆ ತರ್ಕಿಸಬೇಕೆನ್ನುವವರು ಒಪ್ಪಬೇಕಾದ ಭಾಗ ಒಂದಿದೆ: ಮನಸ್ಸು ವಿಭಾಜ್ಯ ವಸ್ತುವಲ್ಲ, ಅದೊಂದು ಅವಿಭಾಜ್ಯ ವ್ಯವಸ್ಥೆ. ದಿನಕರನ ಚಿತ್ರಣ ದಲ್ಲಿ ಒಂದು ವಿಧವಾದ ಅಸಹಾಯತೆ ಎದ್ದು ತೋರುವುದು ಅಪರಿಹಾರ್ಯವೇ ಆಗಿದೆ. ಮೂಲತಃ ಅವನ ವ್ಯಕ್ತಿತ್ವದಲ್ಲಿಯೇ ಇಲ್ಲದ ಶಕ್ತಿ ಕಾದಂಬರಿಯಲ್ಲಿ ಮೂಡಿಬರಲಾರದು. ಆ ರೀತಿ ಅಪೇಕ್ಷೆ ಮಾಡಿದರೆ ಕಾದಂಬರಿಕಾರನಿಗೆ ಅನ್ಯಾಯಮಾಡಿದಂತೆಯೇ ಸರಿ. ಅಲ್ಲದೆ ಕೃಷ್ಣಾನಂಥ ತುಂಬು ಜೀವಕಳೆಯ ವ್ಯಕ್ತಿತ್ವದ ಎದುರಿನಲ್ಲಿ ಎಂಥ ಪಾತ್ರವಾದರೂ ನಿಸ್ಸಾರವೆಂದು ತೋರಿದರೆ ಆಶ್ಚರ್ಯವೇನೂ ಇಲ್ಲ.

ಕಥೆಯ ಆವರಣದಲ್ಲಿ ಹಿನ್ನೆಲೆಯಾಗಿ ಬಂದಿರತಕ್ಕ ಪಾತ್ರಗಳಲ್ಲಿ ಪ್ರಭಾ, ಕಾತರಕೀ ಹಾಗೂ ಚಂದ್ರಕಾಂತ ಜೀವಂತ ವ್ಯಕ್ತಿಗಳಾಗಿದ್ದಾರೆ. ಕೃಷ್ಣೆಯನ್ನು ಕೈಹಿಡಿದ ಚಂದ್ರಕಾಂತ, ಆಗಂತುಕನೆಂಬಂತೆ, ಕಥೆಯಲ್ಲಿ ಒಂದೆರಡು ಸಲ ಕಾಣಿಸಿಕೊಂಡರೂ ಅವನು ಮನಸ್ಸಿನಿಂದ ಮರೆಯಾಗತಕ್ಕ ವ್ಯಕ್ತಿಯಲ್ಲ. ಸೈನಿಕನ ಮಿತಭಾಷೆಯೊಂದೇ ಅಲ್ಲದೆ ಸೈನಿಕನಲ್ಲಿರಬೇಕಾದ ಔದಾರ್ಯವೂ ವಿಶಾಲಮನೋಭಾವನೆಯೂ ಆತನಲ್ಲಿವೆ.

ಊರೂರಿನ ಮನೆಮನೆಗಳಲ್ಲಿ ಗೃಹಲಕ್ಷ್ಮಿಯಾಗಿ ಬೆಳಗುತ್ತಿರುವ ಸುಮಂಗಲೆಯನ್ನು ಕಮಲೆಯ ಪಾತ್ರದಲ್ಲಿ ಕಾಣಬಹುದಾಗಿದೆ. ಅವಳ ಮೌನ, ಮಾತಿಗಿಂತಲೂ ಅರ್ಥಪೂರ್ಣವಾಗಿದೆ. ಕಮಲೆಯಲ್ಲಿ ವಿಧೇಯತೆ ಇದೆ ಎನ್ನುವುದಕ್ಕಿಂತಲೂ ಸತೀಭಾವವೇ ತುಂಬಿಕೊಂಡು ಅವಳದೊಂದು ಮೂರ್ತಿಯಾಗಿದೆಯೆನ್ನಬಹುದು.

ಕಾದಂಬರಿಯ ಪೂರ್ವಾರ್ಧದಲ್ಲಿ ಕಥೆಯ ಗಮನ ಸ್ವಲ್ಪ ಚುರುಕಾಗಿದ್ದರೆ ಇನ್ನೂ ಚೆನ್ನಾಗುತ್ತಿತ್ತು; ಆಗ ಕಾದಂಬರಿ ಇನ್ನೂ ಮೈ ತುಂಬಿಕೊಂಡು ಬರುತ್ತಿತ್ತು ಎನ್ನುವ ಅಪೇಕ್ಷೆ ಮಾತ್ರ ಹಲವರಲ್ಲಿ ಇನ್ನೂ ಉಳಿಯಬಹುದು. ಆದರೆ ಈ ಆಸೆಗೆ ಅಂತ್ಯವೆಲ್ಲಿದೆ? ಹೊಸ ಸಾಧನೆಗೆ ಅತೃಪ್ತಿಯೇ ಪ್ರಚೋದನಾ ಶಕ್ತಿಯಾಗಬೇಕು. ಉಳಿದ ಬೇಕು ಬೇಡುಗಳ ವಿಚಾರ ಏನಾದರಾಗಲಿ; ಕಾದಂಬರಿಯಲ್ಲಿ ಜೀವ ಮಿಡಿಯುವ ಶಕ್ತಿಯೊಂದು ಇದ್ದರಾಯಿತು. ಆಗ ಎಂಥ ರಚನೆಯೂ ಕೃತಿಯೆನಿಸುತ್ತದೆ; ಕಲೆಯೆನಿಸುತ್ತದೆ. ಆ ಕಾರ್ಯವನ್ನು

ಸಾಧಿಸಿ ಶ್ರೀ. ದತ್ತಾತ್ರೇಯ ಕುಲಕರ್ಣಿ ಕೃತಕೃತ್ಯರೆನಿಸಿದ್ದಾರೆ. ಒಂದು ಮೀಸುಬಂಡೆಯಿಂದ ಇನ್ನೊಂದು ಮೀಸುಬಂಡೆಗೆ ಜಿಗಿದು, ಅವರು ಹೊಸ ಸಂಪತ್ತನ್ನು ತಮ್ಮ ಜಾಲದಲ್ಲಿ ಸೆರೆಹಿಡಿದು ತಂದು, ಕನ್ನಡ ಕಾದಂಬರಿಯ ಆಳ ವಿಸ್ತಾರಗಳನ್ನು ಹೆಚ್ಚಿಸಬೇಕು. ಇದೊಂದೇ ಪರಿಹಾರದಿಂದ ನಮಗೆ ಪರಿಹಾರವಿಲ್ಲ. ಆಡುವವರು ನಾವಿರ ಆಡಲಿ; ಲೆಕ್ಕಣಿಕೆ ಮಾತ್ರ ಓಡಲಿ. ಹಾದಿಯೇ ಅನುಗಾಲ ಹೊರಳೀತಲ್ಲದೆ ಬೆಟ್ಟವಲ್ಲ ಎನ್ನುವುದು ಬರೆಹಗಾರನ ನಿತ್ಯ ಮಂತ್ರವಾಗಲಿ.

“ ನವಜೀವನ ” — ಪಾಟೀಲ ಪುಟ್ಟಪ್ಪ

ಹುಬ್ಬಳ್ಳಿ: ಎಪ್ರಿಲ್ ೧೩, ೧೯೫೨

# ಆಪ್ತಾಲೋಚನೆ

ಪ್ರಿನ್ಸಿಪಾಲ್ ಗೋಕಾಕರು ಬಹುದಿನಗಳ ಹಿಂದೆಯೇ ನಾನು ಕಾದಂಬರಿ ಬರೆಯಬೇಕೆಂದು ಸೂಚಿಸಿದ್ದರು. ನನ್ನ ಸುತ್ತಾಟ, ಗುರುತು-ಪರಿಚಯಗಳ ವ್ಯಾಪ್ತಿ ಕಾದಂಬರಿ ರಚನೆಗೆ ತಕ್ಕ ಪಾತ್ರತೆ ತಂದಿವೆಯೆಂದು ಅವರು ಹಾಗೆ ಹೇಳಿರಬಹುದು.

ಈ ಮೊದಲಿನ ನನ್ನ ಎರಡು ಕೃತಿಗಳಿಗೆ ಮುನ್ನುಡಿ ನುಡಿದ ಮಿತ್ರರು, ಸ್ನೇಹಿತರಾದ ವಿಮರ್ಶಕರು ನಾನು ಹೆಚ್ಚು ಹೆಚ್ಚಾಗಿ ಬರೆಯಬೇಕೆಂಬ ತಮ್ಮ ಆನೆಯನ್ನು ವ್ಯಕ್ತಪಡಿಸಿದ್ದರು. ಈ ಕೃತಿಗೆ 'ಅವತಾರಿಕೆ'ಯನ್ನು ಬರೆದ ಗೆಳೆಯರೂ ಅದೇ ಸೋಬಾನ ಹಾಡಿದ್ದಾರೆ.

ಬಹುದಿನಗಳಿಂದ ನನ್ನ ಮನಸ್ಸಿನಲ್ಲಿ ಪಾಕಗೊಳ್ಳುತ್ತಿದ್ದ ಈ ಕೃತಿಯ ವಸ್ತುವಿಗೆ ಆವರಣದ ಉಡಿಗೆ ಉಡಿಸಿ ನಿಲ್ಲಿಸಬೇಕೆಂದಾಗ ನಾನು ಬರೆಯುತ್ತಿದ್ದಂತೆ ಒಬ್ಬಿಬ್ಬರು ಗೆಳೆಯರು ತುಂಬ ಆಸ್ಥೆಯಿಂದಲೂ ಕೌತುಕದಿಂದಲೂ ಓದಿಸಿ ಎದೆಗೊಟ್ಟು ಕೇಳಿದರು. ಬರೆದಾದ ಮೇಲೆ ಇನ್ನು ಕೆಲವರು ಮಿತ್ರರಿಗೆ ಇಡಿಯಾಗಿ ಓದಿತೋರಿಸಿದ್ದೇನೆ. ಮತ್ತೆ ಒಬ್ಬಿಬ್ಬರು ಹಸ್ತಪ್ರತಿಯನ್ನೇ ಇಸಿದುಕೊಂಡು ಓದಿದರು.

ಇವರೆಲ್ಲ ನನ್ನ ಭಾಗ್ಯದೇವತೆಗಳಾಗಿ ಒಂದೊಂದು ಒಳ್ಳೆಯ ಮಾತನ್ನೇ ಆಡಿದರು. ಮತ್ತಷ್ಟು ಧಾರಾಳದ ಮಾತು ಸೇರಿದ 'ಅವತಾರಿಕೆ'ಯೂ ಸ್ನೇಹ ಮಂದಿರದಿಂದಲೇ ಒಮ್ಮುಖದ ಪ್ರಸಾದವಾಗಿ ಬಂದು ನಿಲ್ಲುವಂತಾಗಿದೆ, ಈಗ.

ಒಂದು ದಿನ ಶಬ್ದಕೋಶದ ಕಾನನದಲ್ಲಿ ಸುತ್ತಿ ಒಂದಿಷ್ಟು ಫಲ ಆಯ್ದು ತಂದು ತೋರಿಸುತ್ತ ಗೆಳೆಯ ಪಾಟೀಲ ಪುಟ್ಟಪ್ಪನವರು "ಮುನ್ನುಡಿಗೆ 'ಅವತಾರಿಕೆ'ಯೆಂದರೆ ಹೇಗೆ"—ಎಂದು ಕೇಳಿದರು. 'ಪರಿಹಾರ'ದ ಅಚ್ಚಿನ ಕೆಲಸ ನಡೆದಿತ್ತು. "ನಿಮ್ಮ 'ಅವತಾರಿಕೆ'ಯ ಅವತಾರವಾಗಲಿ"—ಎಂದು ಅಚ್ಚಿನ ಪುಟಗಳನ್ನು ಮುಂದೆಮಾಡಿದೆ. "ಶಬ್ದಪ್ರಯೋಗದ ಬಗ್ಗೆ ನಾನು ಕೇಳಿದ್ದು" ಎಂದರು. "ಪ್ರಯೋಗವಾಗಿಬಿಡಲಿ" ಎಂದೆ ನಾನು. ಅಂತೂ ಒಪ್ಪಿಕೊಂಡು 'ಅವತಾರಿಕೆ' ಬರೆದು ನೀಡಿದರು.

ಗೆಳೆಯ ಪುಟ್ಟಪ್ಪನವರದು ಎಂದಿನಿಂದಲೂ ಧಾರಾಳದ ಪ್ರಕೃತಿ. ಓರೆ-ಕೋರೆಯನ್ನವರು ಅರಿಯರು; ಎಲ್ಲ ನೇರವಾದ ಮಾತು. ಅಮೇರಿಕೆಗೆ ವಿದ್ಯಾರ್ಜನೆಗೆ ಹೋದವರು ಆ ಸಂಪತ್ಸಮೃದ್ಧ ದೇಶದಲ್ಲಿ ಮನಸ್ಸಿನ ಮೈಯನ್ನು ಮತ್ತಷ್ಟು ಹಿಗ್ಗಿಸಿಕೊಂಡೇ ಬಂದವರು ನನ್ನ ಬಗ್ಗೆ ಇಷ್ಟು ಮಾತನ್ನು ಬರೆದರು. ಕಾದಂಬರಿ ರಚನೆಗೆ ನನ್ನ ಅರ್ಹತೆ, ಅಧಿಕಾರಿಗಳ ಬಗ್ಗೆ ಹೇಳಿದ್ದಾರೆ. ಅವೆಲ್ಲಾ ನನಗಿಲ್ಲವೆಂದು ಅವರ ಮಾತಿಗೆ ಎರಡು ಆಡಲೇ ನಾನು ? ನಾಡಿನ ಮಂಗಲದ ಅವರ ದೃಷ್ಟಿಗೆ ನಾನು ತೆರೆ ಎಳೆದಂತಾದೀತು. ಅದು ಆಡುವ ಮನಸ್ಸಿನ ಸಂಸ್ಕಾರದ ಧಾರಾಳ; ನೋಡುವ ದೃಷ್ಟಿಯ ಹರವು— ಎಂದೇನು.

ಈ ಸ್ನೇಹ ಸಂಪುಟಕ್ಕೆಲ್ಲ ವಂದಿಸುತ್ತೇನೆ.

ಧಾರವಾಡ<br>೧೩-೪-೫೨

**ದತ್ತಾತ್ರೇಯ ಕುಲಕರಣಿ**

*To feel, to love, to suffer,*
*to devote herself,*
*Will always be the test of*
*the life of a woman.*

—Balzac

# ಪರಿಹಾರ

## ೧

ಕಚೇರಿಯ ಕಾಗದಗಳ ಕಡತದಲ್ಲಿ ಮುಳುಗೇಳುತ್ತಿದ್ದ ದಿನಕರನಿಗೆ ಗಡಿಯಾರದ ಮೇಲೆಯೇ ಕಣ್ಣು. ಐದು ಬಾರಿಸಿದೆ; ಇನ್ನೂ ಸಾಹೇಬರು ಇದ್ದಾರೆ. ಅವರು ಏಳದೆ ಕಾರಕೂನರಾರೂ ಹೊರಡುವಂತಿಲ್ಲ. ಕಾಗದ ಗಳನ್ನು ಜೋಡಿಸಿ ಇಡಲೂ ಅವರು ಹೋದಮೇಲೆಯೇ ಸಮಯ. ಹಿಂದೊಮ್ಮೆ ಐದು ಗಂಟೆಗೆ ಸರಿಯಾಗಿ ಕಾಗದಗಳನ್ನು ಹೊಂದಿಸಿ ಪೆಟ್ಟಿಗೆ ತುಂಬಿ ಹೊರಟುಬಿಟ್ಟಿದ್ದ ದಿನಕರ. ಇದನ್ನು ಕುಳಿತು ನೋಡಿದ ಸಾಹೇಬರು ಮರುದಿನ ಕರೆದು ' ನಿನ್ನೆ ಐದು ಗಂಟೆಗೇ ನಿಮಗೆ ಮದುವೆಯ ಮುಹೂರ್ತ ವಿತ್ತೇ ? ' ಎಂದು ಕೇಳಿದ್ದರು.

ಮದುವೆಯಾಗಿ ಬಂದಮೇಲೆ ಈ ಆತುರ ಅವನಿಗೆ. ಮೊದಲಾದರೆ ಎಲ್ಲರೊಡನೆ ಎದ್ದು ಅವರೊಡನೆ ಆಫೀಸು ಕ್ಯಾಂಟೀನದಲ್ಲಿ ಚಹಾ ಕುಡಿದು ಕ್ಲಬ್ಬಿನ ದಾರಿ ತುಳಿಯುತ್ತಿದ್ದ. ಈಗ ಕ್ಲಬ್ಬು ಅವನಿಗೆ ಮನೆಯಲ್ಲಿಯೇ. ಚಹಾಕ್ಕೆ ನೀರು ಕುದಿಸಿ ಇವನ ದಾರಿಯನ್ನೇ ನೋಡುತ್ತ ನಿಂತ ಕಮಲೆ ಇವನ ಕಣ್ಣೆದುರಿಗೇ ನಿಂತಂತಿದೆ. ' ಬಾಗಿಲಲ್ಲಿ ನಿಂತಿರುವ ಕಮಲೆ ಇಂದು ನೀಲಿ ಸೀರೆ ಉಟ್ಟಿರಬೇಕು. ಮೊನ್ನೆ ಹೊಲಿಸಿದ ತಿಳಿನೀಲದ ಜಂಪರು ಹಾಕಿ ಕೊಂಡಿರಬೇಕು. ಹೂವಿನವಳು ಐದಕ್ಕೇ ಮನೆಯ ಮುಂದೆ ಕೂಗಿಕೊಂಡು

ಹೋಗುತ್ತಾಳೆ. ಮಾಲೆ ತೆಗೆದುಕೊಳ್ಳಲು ಚಿಲ್ಲರೆ ಇಟ್ಟುಬಂದಿದ್ದೆ. ಕೊಂಡಿರು ವಳೋ ಇಲ್ಲವೋ....ಅವಳು ತಾನಾಗಿ ತೆಗೆದುಕೊಳ್ಳುವದೇ ಇಲ್ಲ. ಮಲ್ಲಿಗೆಯ ಮೊಗ್ಗಿನಮಾಲೆ ಅವಳ ಮುಡಿಗೆ ಬಿದಿಗೆ ಚಂದ್ರನನ್ನು ತಿರುವಿ ಇಟ್ಟಂತಿರುತ್ತದೆ. ನನ್ನನ್ನು ಕಂಡು ಮುಗುಳು ನಗುವಾಗ ಅವಳ ಕೆನ್ನೆಯ ಗುಲಾಬಿ ಸಂಜೆಯ ರಾಗರತಿಯೇ. ಗುಳಿ ಬೀಳುವ ಅವಳ ಮೆದುವಾದ ಗಲ್ಲ........'

ಸಾಹೇಬರ ಬೂಟಿನ ಸಪ್ಪಳ! ಹೊರಗೆ ಹೋದರು. ದಿನಕರ ಅವಸರದಿಂದ ಕಾಗದಗಳನ್ನೆತ್ತಿ ಕಪಾಟಿನಲ್ಲಿ ತಾನೇ ತುರುಕಿದ. ಕಾಸೀಮ ಬರುವವರೆಗೆ ಅವನಿಗೆ ಸಾವಧಾನವಿಲ್ಲ. ಈ ಸ್ವಾವಲಂಬಿ ಸ್ವಾಮಿಯನ್ನು ಕಂಡ ಕಾಸೀಮ 'ಮನೆಗೇ ಹೊರಟಿರಾ ರಾಯರೇ?' ಎಂದ. ದಿನಕರ ಪ್ರತಿಯಾಗಿ ಮುಗುಳು ನಕ್ಕು ಅವಸರವಸರವಾಗಿ ಹೊರಬಿದ್ದ.

ಜತೆಯ ಕಾರಕೂನರಿನ್ನೂ ಕಚೇರಿಯಲ್ಲೇ ಲಲ್ಲೆಯಲ್ಲಿದ್ದಾರೆ. ದಿನಕರನಿಗೆ ಅವರದೇ ಅಂಜಿಕೆ—ಅವರು ಬಂದು ತನ್ನನ್ನು ಎಲ್ಲಿ ಇಸ್ಪೀಟು ಆಟಕ್ಕೆ ಎಳೆಯುವರೋ ಎಂದು.

ದಿನಕರ ಗೋಕುಲ ನಿವಾಸದ ಎದುರಿನಿಂದ ಹೋಗುವಾಗ ಗಮಗಮ ವಾಸನೆ ಬಂತು. ಒಳಕ್ಕೆ ಹೋಗಿ ಸೀ-ಖಾರಗಳ ಪೊಟ್ಟಣ ಕಟ್ಟಿಸಿಕೊಂಡು ಮತ್ತೆ ಅದೇ ಅವಸರದಲ್ಲಿ ಓಡಿದ.

ಹೊಸತಿಲಲ್ಲೇ ಕಮಲೆ ಕಾದಿದ್ದಳು; ಇವನನ್ನು ಕಂಡು ಒಳಸೇರಿದಳು. ದಿನಕರ ಆಫೀಸು ವೇಷದಲ್ಲೇ ಅಡಿಗೆಮನೆ ಹೊಕ್ಕ. ಬೂಟುಗಳನ್ನಾದರೂ ಕಳಚಲಿಲ್ಲವಲ್ಲ—ಎಂಬಂತೆ ಕಮಲೆ ಇವನ ಧೂಳಿಡಿದ ಕಾಲ ಕಡೆಗೆ ನೋಡಿದಳು. ಇವನ ಅವಸರದ ತುಳಿತಕ್ಕೆ ಚಿಮ್ಮಿದ ಕೆಂಧೂಳಿ ಮೊಳಕಾಲವರೆಗೂ ಹರಡಿಕೊಂಡಿತ್ತು.

"ಇನ್ನು ಮೇಲೆ ಅಡಿಗೆಮನೆಯಲ್ಲೂ ಟೇಬಲ್ಲು-ಖುರ್ಚಿಗಳಿರಲಿ" ಎನ್ನುತ್ತ ತಿಂಡಿಯ ಪೊಟ್ಟಣ ಅವಳ ಕೈಗಿತ್ತ. ಅವಳು ಅದಕ್ಕೆ ಸುತ್ತಿದ ದಾರದ ಎಳೆಯಕೂಡ ಆಟವಾಡತೊಡಗಿದಳು. ಅದೇ ಸಮಯವೆಂದು ದಿನಕರ ಅವಳನ್ನು ಸೆಳೆದುಕೊಂಡಾಗ, ಬಳ್ಳಿಯಾದ ಕಮಲೆ ಇವನ ಕೋಟು ಕಳಚಲೆಳಸಿದಳು. ದಿನಕರ ತಾನೇ ಕಳಚುತ್ತ ಪಡಸಾಲೆಗೆ ಬಂದ.

ದಿನಕರ ಕೈಕಾಲು ಮುಖ ತೊಳೆದುಕೊಂಡು ಬಂದಾಗ ಚಹಾ ಇಳಿದು ಉಗಿಯಾಡುತ್ತಿತ್ತು. ಎರಡು ತಟ್ಟೆಯಲ್ಲಿ ತಿಂಡಿ ಪಾಲಾಗಿತ್ತು. ಆದರೆ ಕಪ್ಪು-ಬಸಿಗಳದು ಮಾತ್ರ ಒಂದೇ ಜತೆ !

“ ಅಲ್ಲ; ತಿಂಡಿ ಮಾತ್ರ ಪಾಲಾಯಿತು. ಚಹಾಕ್ಕೆ ನಿನಗೆ ಬೇರೆ ಕಪ್ಪು ಬೇಡವೇನು ? ”

“ ನಿಮ್ಮದಾಗಲಿ. ”

“ ಹಾಗಾದರೆ ತಿಂಡಿಯೂ ಒಂದೇ ತಟ್ಟೆಯಲ್ಲಿರಲಿ ” ಎನ್ನುತ್ತ ದಿನಕರ ಎರಡನ್ನೂ ಕೂಡಿಸಲೆತ್ನಿಸಿದಾಗ ಕಮಲೆ “ ಅದು ನಾಳೆಗೆ ” ಎಂದಳು. “ ನಾಳಿನ ಮಾತು ನಾಳೆ ” ಎನ್ನುತ್ತ ದಿನಕರ ಹಲ್ವಾದ ಒಂದು ಮುದ್ದೆಯನ್ನು ನೈವೇದ್ಯ ಮಾಡಿದ.

ಬಾಯಲ್ಲಿ ಬಿದ್ದ ಮುದ್ದೆಯನ್ನು ಮೆಲ್ಲುತ್ತಿದ್ದ ಕಮಲೆ ಉಕ್ಕಿಬಂದ ನಗೆಯಿಂದ ಅದನ್ನು ಬಾಯಲ್ಲುಳಿಸಿಕೊಳ್ಳಲಾರದಾದಳು. ಅದು ಕೆಳಕ್ಕೆ ಬಿದ್ದುದನ್ನು ನೋಡುವಾಗ ನಗೆಯೊಡನೆ ಭಯವೂ ಬೆರೆತಿತ್ತು. ಮುಖ ಕೆಂಪಾಗಿತ್ತು. ಕಣ್ಣು ಕುಣಿಯುತ್ತಿದ್ದವು. ಅದೇ ಸಮಯ ತುಟಿಗಳು ಹಿಂಡಿದಂತಾಗಿ ಕಬ್ಬಿನ ರಸ ಚಿಮ್ಮಿದಂತಾಯಿತು.

* * * *

‘‘ ಪೇಟೆಗೆ ಹೋಗೋಣವೇ ಕಮಲ ?”

“ ಇಂದು ಯಾಕೆ ?”

“ ಸುಮ್ಮನೆ ಸುತ್ತಾಡಿಕೊಂಡು ಬಂದರಾಯಿತು.”

“ ಸುಮ್ಮನೆ ಯಾಕೆ ?”

“ ಬಿಡು; ಹುಬ್ಬಳ್ಳಿ ಹಾದಿಗೆ ವಾಕಿಂಗು ಹೋಗೋಣ. ”

“ ಬೇಡ, ಪೇಟೆಗೇ ಹೋಗೋಣ. ಪಲ್ಲೆಕಾಯಿ ತೀರಿದೆ. ”

“ ಆಗಲಿ.”

ದಿನಕರ ಸುಮ್ಮನೆ ಬಿಡುವದಿಲ್ಲವೆಂದು ಕಮಲೆಗೆ ಗೊತ್ತು. ಒಂದು ದಿನ ಅವನು ಕರೆದು ತಾನು ಹೋಗದಿದ್ದಾಗ ದಿನಕರ ಕಾಲನ್ನಪ್ಪಳಿಸುತ್ತ ಒಬ್ಬನೇ ಹೋಗಿ ಹುಳಕ ಕಾಯಿಪಲ್ಲೆ ತಂದಿದ್ದ. ‘ ದುಡ್ಡು ಸುರಿದು ಇಂಥದನ್ನೇಕೆ ತರಬೇಕೆ’ಂದಾಗ ‘ ನೀನು ಬರಬೇಕಿತ್ತು ?’ ಎಂದಿದ್ದ.

ಪಲ್ಲೆಯ ನೆಪವಾಯಿತು. ಬಟ್ಟೆಯಂಗಡಿಗೆ ನುಗ್ಗಿದರು. ಕಮಲೆ ಬೇಡ ವೆಂದರೂ ನಾಲ್ಕು ಬಟ್ಟೆಯ ತುಂಡು ಕೊಂಡಾಯಿತು. ಹೂವಾಯಿತು; ಹಣ್ಣಾಯಿತು. ಊದುಬತ್ತಿ, ಸ್ನೋ, ಪವುಡರು, ದಂತದಬಾಚಣಿಗೆ ಎಲ್ಲಾ ಕೊಂಡಾಯಿತು. 'ಇದೆಲ್ಲಾ ಯಾಕೆ' ಎನ್ನುತ್ತಿದ್ದ ಕಮಲೆ ಸುಮ್ಮನೆ ಹಿಂಬಾಲಿಸಿದಳು.

"ಇದೆಲ್ಲಾ ನಿನಗಾಯಿತು, ಕಮಲ. ನನಗೆ ?"

"ಏನು ಬೇಕೋ ತಗೊಂಡರಾಯಿತು."

"ಏನು ಬೇಕೆಂದೇ ತಿಳಿಯದು."

ಕಮಲೆ ಮಾತಾಡದೆ ಇವನ ಮುಖ ನೋಡುತ್ತಿದ್ದಳು. ಇವನಿಗೇನು ಬೇಕೆಂದು ಅವಳು ಅಲ್ಲಿ ಹುಡುಕುತ್ತಿದ್ದಳು.

"ನಾಲ್ಕು ಬ್ಲೇಡು ಕೊಂಡರಾಯಿತು, ನನಗೆ" ಎನ್ನುತ್ತ ದಿನಕರ —

"ಟಾಂಗಾದಲ್ಲಿ ಹೋಗೋಣವೆ ?" ಎಂದು ಕೇಳಿದ.

"ಯಾಕೆ ? ನಡೆದುಕೊಂಡೇ ಹೋದರಾಯಿತು."

"ಆಗಲಿ; ನಡೆ."

ಮಬ್ಬುಗತ್ತಲೆಯಲ್ಲಿ ಒಬ್ಬರಕಾಲನ್ನೊಬ್ಬರು ತುಳಿಯುತ್ತ ಮನೆ ಸೇರಿದರು.

## ೨

ದಿನಕರನಿಗೆ ಕೆಲಸವಾಗಿ ನಾಲ್ಕು ವರುಷವಾಗಿದೆ. ಇದ್ದೊಬ್ಬ ತಾಯಿ ಇವನ ಮದುವೆ ನೋಡದೆ ಕಣ್ಣುಮುಚ್ಚಿದ್ದಳು. ತಂದೆಯ ಆಸ್ತಿಯಾಗಿ ಅವ ನಿಗೆ ಇನ್ನೇನೂ ಉಳಿದಿಲ್ಲ. ತಾನು; ತನ್ನ ಸ್ವಂತ ಆಸ್ತಿ ನವಕರಿ.

ತಾಯಿಯನ್ನು ಅಷ್ಟು ಬೇಗ ಕಳೆದುಕೊಳ್ಳಲಾರದೆ ಔಷಧೋಪಚಾರ ಚೆನ್ನಾಗಿಯೇ ಮಾಡಿಸಿದ. ಅವಳಿಗೆ ಇವನ ಮದುವೆಯದೊಂದು ಹೃದ್ರೋ-ಗವೇ ಆಯಿತು. ಒಳ್ಳೆಯ ಕೆಲಸದಲ್ಲಿದ್ದ ಮಗನಿಗೆ ಒಂದು ಮದುವೆ ಬೇಡವೇ ಎಂದವಳ ಕೊರಗು. ಹೌದು, ಅದು ಕೊರಗಲ್ಲದೆ ಇನ್ನೇನು ? ಅನೇಕ ಕಡೆ ಗಳಿಂದ ಕನ್ಯಾಪಿತೃಗಳು ಬಂದು ನೋಡಿ ಹೋಗಿದ್ದಾರೆ. ಇವನೂ ನೋಡಿದ ರಲ್ಲಿ ಅರ್ಧದಷ್ಟು ಕನ್ನೆಯರನ್ನೂ ಒಪ್ಪಿದ್ದಾನೆ. ಆದರೂ ಒಂದೂ ಸಂಬಂಧ

ಮದುವೆಯುವರೆಗೆ ಬೆಳೆದು ಬರಲಿಲ್ಲ. ಒಪ್ಪಿ–ಒಪ್ಪಿಸಿಕೊಂಡು ಹೋದವರೂ ತಿರುಗಿ ಬರುವದಿಲ್ಲ. ಇದು ಹೀಗೇಕೆ ?

ಇದರ ಗುಟ್ಟನ್ನು ತಾಯಿ ಬಲ್ಲಳು. ದಿನಕರನ ತಂದೆಗೆ ಸಮಾಜದಲ್ಲಿ ಅಂಥ ಒಳ್ಳೆಯ ಹೆಸರಿದ್ದಿಲ್ಲ. ಅವರು ಅಡಚಣಿಗೆ ಮಾರಿಕೊಂಡ ಆಸ್ತಿಯನ್ನು ಜನ ಇನ್ನೂ ಶಂಕರರಾಯರ ಹೊಲ, ಶಂಕರರಾಯರ ಮನೆ ಎಂದೇ ಕರೆಯುತ್ತಾರೆ. ಪಾರ್ವತೀಬಾಯಿ—ದಿನಕರನ ತಾಯಿ—ಕತ್ತುಬಗ್ಗುವಷ್ಟು ವಸ್ತ್ರ-ಒಡವೆ ಇಟ್ಟವಳು. ಅವೂ ವರುಷಕ್ಕೊಂದರಂತೆ ಭಾರವಿಳಿಸಿ ಹೋಗಿವೆ. ಯಜಮಾನರೂ ಹೋದರು. ಆಗ ದಿನಕರನಿಗೆ ಇನ್ನೂ ಹದಿನಾಲ್ಕುವರುಷ. ಈ ಹತ್ತುವರುಷ ಮಗನಿಗಾಗಿ ಜೀವ ತೇಯ್ದು, ಅಡಿಗೆ-ನೀರು ಮಾಡಿ ದಿನಕರನ ವಿದ್ಯಾಭ್ಯಾಸ ಮಾಡಿಸಿದರು ಪಾರ್ವತೀಬಾಯಿ. ಯಾರು ಯಾರದೋ ಕಾಲುಹಿಡಿದು ಕೆಲಸ ದೊರಕಿಸಿ ಕೊಟ್ಟವರೂ ಅವರೇ.

ಇಂಥವರ ಮಗ ಎಂದು ತನ್ನ ಮಗನಿಗೆ ಒಂದು ಹೆಣ್ಣು ಬರದೆ ಹೋಯಿತಲ್ಲ—ಎಂದು ಕೊರಗಿ ಸೊರಗಿದ ತಾಯಿ ತನ್ನ ಕಲ್ಯಾಣ ಚಿಂತನೆಯಲ್ಲಿಯೇ ಕಣ್ಣು ಮುಚ್ಚಿದ್ದೊಂದು ದಿನಕರನಿಗೆ ಆಘಾತವೇ ಆಗಿತ್ತು. 'ಮಾತೃದೇವೋಭವ' ಎಂದು ದಿನಕರ ತಾಯನ್ನು ಮನಸ್ಸಿನಲ್ಲಿಯೇ ಪೂಜಿಸುತ್ತಿದ್ದ. ಅವಳ ಅಪಾರ ಅಂತಃಕರಣದ ಶಿಶುವಾಗಿ, ಓಡುವ ಜಗತ್ತಿನಲ್ಲಿ ತಾನಿನ್ನೂ ತಪ್ಪುಹೆಜ್ಜೆ ತುಳಿವ ಮಗುವೆಂದೇ ತಿಳಿದುಕೊಂಡಿದ್ದ. ತಾಯ ನೆರೆ ತಪ್ಪಿದಾಗ, ಆ ಪ್ರೇಮಛತ್ರವಿಳಿದಾಗ ಬೆಳುದಿಂಗಳು ಬಿಸಿಲಾಗಿ, ನೀರು ಮೃಗಜಲವಾಗಿ ವಿಸ್ತಾರವಾದ ಜಗತ್ತಿನಲ್ಲಿ ತಾನೊಬ್ಬನೇ ಒಂಟಿ ಯಾತ್ರಿಕನಂತಾದ. ತಂತಾನೆ ಅತ್ತು ಅತ್ತು ತೃಪ್ತಿಪಡೆದ; ತಂತಾನೆ ರಮಿಸಿಕೊಂಡ. ಕೆಲಸದ ಒಂದು ನೆರೆ ಉಳಿದಿತ್ತು. ಆಫೀಸಿನ ಗೆಳೆಯರಿದ್ದರು. ಊರಲ್ಲಿ ಪರಿಚಿತರಿದ್ದರು. ಆದರೆ ಅವನಿಗೆ ಅದಾವುದೂ ಹೃದಯದ ಬಳಿಯ ವಸ್ತುವಾಗಿ ಕಾಣಲಿಲ್ಲ; ದೂರದ ಬೆಟ್ಟ.

ಒಬ್ಬಂಟಿಯಾಗಿದ್ದ ದಿನಕರನ ಮಠದಂಥ ಮನೆಗೆ ಅವನ ಓರಗೆಯ ಕಾರಕೂನರು, ಗೆಳೆಯರಾಗಿ ಬರತೊಡಗಿದರು. ದಿನವೂ ಆಫೀಸು ಮುಗಿದನಂತರ ಇದೊಂದು ಆಟದ ಅಡ್ಡೆಯಾಯಿತು. ಚಹಾರಾಧನೆಯೂ ನಡೆಯಿತು. ಇಸ್ಪೀಟು ಆಟವೂ ಸುರುವಾಯಿತು.

ಆಗ ದಿನಕರನಮು ತುಂಬಿದಮನೆ. ದಿನವೂ ರಾತ್ರಿಯೂ ಯಾವುದರ ಪರವೆಯಿಲ್ಲದೆ ಇಸ್ಪೀಟು ಆಡುವ ಗೆಳೆಯರು. ಚಹಾ–ಬೀಡಿ–ಸಿಗರೇಟಿನ ಸಮಾರಾಧನೆ. ಸದಾ ಮಾತು ಉಕ್ಕಿಸುತ್ತಿದ್ದ ಆ ಸ್ನೇಹಿತರ ನೆರವಿಯೂ ದಿನ ಕರನ ಮನವನ್ನು ತುಂಬಲಾರದೆ ಹೋಯಿತು. ಆ ಗದ್ದಲದಲ್ಲಿಯೂ ದಿನಕರ ಒಬ್ಬನೇ ಒಬ್ಬ. ಇವನನ್ನು ಯಾರೊಬ್ಬರೂ ಏನೊಂದನ್ನೂ ಕೇಳಿದವರೇ ಅಲ್ಲ. ಅದು ಅವನ ಮನೆಯೆಂದೂ ಅವರು ಚಿಂತಿಸರು. ಆ ಮನೆಗೆ ದಿನ ಕರನೂ ತಮ್ಮಂತೆ ಒಬ್ಬ ಸದಸ್ಯನೆಂಬಂತೆಯೇ ಅವರ ನಡವಳಿಕೆ.

ತಾಯಿಯ ಅನಂತವಾದ ಪ್ರೇಮದ ರಕ್ಷೆಯಲ್ಲಿದ್ದ ದಿನಕರ ಈ ಹೃದಯಹೀನ, ವ್ಯಸನಾಧೀನ ಜನರ ನೆರವಿಯಿಂದ ಬೇಸತ್ತ. ಊಟ ವಾಯಿತೇ—ಎಂದು ಕೇಳುವವರೂ ಇಲ್ಲ. ನಿದ್ರೆಗೇ ಅವಕಾಶಕೊಡುವದಿಲ್ಲ. ಇವರನ್ನೆಲ್ಲ ಹೊರದೂಡಿ ತನ್ನನ್ನು ಆ ಗದ್ದಲದಿಂದ ಕಾಪಾಡಿಕೊಳ್ಳಬೇಕೆಂಬು ಒಮ್ಮೆ ನಿರ್ಧರಿಸಿದ.

ಆದರೆ ಅದಕ್ಕೆ ಅವಕಾಶವೇ ಆಗಲಿಲ್ಲ. ದಿನಕರನಿಗೆ ಧಾರವಾಡಕ್ಕೆ ವರ್ಗವಾಯಿತು. ಆಗ ಕಣ್ಣು ತೆರೆದ ಗೆಳೆಯರು 'ಸಾಹೇಬರಿಗೆ ಹೇಳಿಕೋ, ಇಲ್ಲೇ ಉಳಿಸಬಹುದು' ಎಂದರು. ದಿನಕರನಿಗೆ ಇದ್ದೂರ ವಾತಾವರಣ ಬೇಸರ ತಂದಿತ್ತು. ಸ್ಥಳ ಬದಲಾವಣೆ ಬಯಸಿತ್ತು ಮನಸ್ಸು. ವರ್ಗವಾದು ದನ್ನವನು ಸಮಾಧಾನದಿಂದ ಸ್ವಾಗತಿಸಿದ.

ಅವನ ಮನೆಯಲ್ಲಿಯೇ ಪಾರ್ಟಿ ಮಾಡಿಸಿ ಗೆಳೆಯರು ಬೀಳ್ಕೊಟ್ಟರು. ಈಗ ಅದು ದಿನಕರನ ಮನೆಯಲ್ಲ; ಗೆಳೆಯರ ಕ್ಲಬ್ಬು.

* * * *

ಬೆಳಗಾವಿ ಬಿಡುವಾಗ ದಿನಕರನಿಗೆ ಒಂದು ಸಂಬಂಧ ಕುದುರಿತು. ಇವನ ಆಫೀಸಿನಿಂದ ಅದೇ ನಿವೃತ್ತರಾದ ವೆಂಕಟರಾಯರು ಮಗಳ ಮದು ವೆಗೆ ಕೈಚೆಲ್ಲಿ ಕುಳಿತವರು, 'ಧಾರವಾಡಕ್ಕೆ ವರ್ಗವಾಗಿ ಹೋಗುವ ದಿನಕರ ಯಾಕೆ ತಮ್ಮ ಅಳಿಯನಾಗಬಾರದು ?' ಎಂದು ಯೋಚಿಸಿದರು. ದಿನಕರನ ತಂದೆ ವ್ಯಸನಿಯಾಗಿ ಮನೆ ಹಾಳುಮಾಡಿಕೊಂಡುದನ್ನು ಅವರು ಬಲ್ಲರು. ಅವನ ತಾಯಿ ಅಡಿಗೆ-ನೀರುಮಾಡಿ ಮಗನನ್ನು ಬೆಳಸಿದ್ದನ್ನೂ ಅವರು ಅರಿಯು ದವರೇನಲ್ಲ. ಆದರೆ ಅವೆಲ್ಲ ಈವರೆಗೆ ಅಡ್ಡಿಯಾಗಿದ್ದ ವಿಷಯಗಳು ತಮ್ಮ

ನಿವೃತ್ತಿಯಿಂದ, ಅವನ ವರ್ಗದಿಂದ,—ಮೇಲಾಗಿ ತಾಯಿಯಿಲ್ಲದ ತಬ್ಬಲಿ ಕಮಲೆ ಬೆಳೆದು ಬೆಟ್ಟವಾದ ಕಾರಣದಿಂದ ಒಂದೊಂದಾಗಿ ಹೊಂದಿಕೊಂಡು ಬಂದು ಈ ವಿಚಾರಕ್ಕೆ ಎಡೆಮಾಡಿದವು. ಇವನಿಗೆ ಗೆಳೆಯರ ಪಾರ್ಟಿಯಾದ ದಿನವೇ ಅವರಲ್ಲಿ ಈ ವಿಚಾರ ಮಿಂಚಿತು. ಮರುದಿನ ದಿನಕರನನ್ನು ಮನೆಗೆ ಕರೆದರು. ಮಗಳಿಂದ ಚಹಾ ಮಾಡಿಸಿಕೊಟ್ಟರು. ಊಟಕ್ಕೆ ಅಲ್ಲಿಯೇ ನಿಲ್ಲ ಹೇಳಿದರು.

ಎಂದೂ ಇಲ್ಲದ ಈ ಆದರಾತಿಥ್ಯ ದಿನಕರನಿಗೆ ಅಚ್ಚರಿಯೇ ಆಯಿತು. ಒಬ್ಬರಾದರೂ ತನ್ನನ್ನು ಮನೆಗೆ ಕರೆದು ಸತ್ಕರಿಸಿದರಲ್ಲ—ಎಂದು ಸಮಾಧಾನವೂ ಆಯಿತು.

ಅಂದು ಭಾನುವಾರವಾಗಿತ್ತು. ದಿನಕರನಿಗೂ ಆಫೀಸಿನ ಚಿಂತೆಯಿದ್ದಿಲ್ಲ. ವರ್ಗದ ಕಾರಣದಿಂದ ಒಂದು ವಾರದ ರಜವೂ ದೊರೆತಿತ್ತು. ಮಧ್ಯಾಹ್ನ ವೆಂಕಟರಾಯರಲ್ಲಿ ಸಮೀಚೀನ ಭೋಜನವಾಗಿತ್ತು. ತಾಯಿ ಹೋದಮೇಲೆ ಅವನು ತೃಪ್ತಿಯಿಂದ ಉಂಡದ್ದೆಂದರೆ ಅದೇ ಒಂದು ಊಟ.

ಊಟ ಮಾಡಿ, ಕವಳ ಮೆದ್ದು ಹಾಗೇ ಉರುಳಿಕೊಂಡ ದಿನಕರ ಜೊಂಪಿನಲ್ಲಿ ಒಳ್ಳೊಳ್ಳೆಯ ಕನಸು ಕಂಡ. ಮೂರು ಗಂಟೆಗೆ ವೆಂಕಟರಾಯರು ಎಬ್ಬಿಸಿದರು. ಮುಖಕ್ಕೆ ನೀರು ಇಟ್ಟಿತ್ತು. ಟವಲು ಅಲ್ಲೇ ಇತ್ತು. ಚಹವೂ ಬಂತು. ಅದೆಲ್ಲವೂ ಕನಸಿನಂತೆಯೇ ಇತ್ತು ದಿನಕರನಿಗೆ. ವೆಂಕಟರಾಯರು ಆಡಿದ ಒಂದು ಮಾತಿನಿಂದ ಎಚ್ಚರದ ಲೋಕಕ್ಕೆ ಬರುವಂತಾಯಿತು.

" ನಿಮಗೆ ಧಾರವಾಡಕ್ಕೆ ವರ್ಗವಾಯಿತು, ದಿನಕರರಾವ್. ನೀವಿನ್ನು ಹೋಗುವವರು. "

" ಹೌದು " ಎಂದು ನಕ್ಕ ದಿನಕರ.

"ನೀವು ಇಲ್ಲೇ ಇದ್ದಾಗ ಹೇಳದ ಒಂದು ವಿಚಾರ ಇಂದು ನಿಮಗೆ ಹೇಳಬೇಕಾಗಿದೆ. "

" ಹೇಳಿರಿ, ಅದಕ್ಕೇನು ? "

" ನನಗೆ ನಿವೃತ್ತಿಯಾಗಿ ತಿಂಗಳಾಯಿತು. "

" ಹೌದು, ನನಗೆ ತಿಳಿಯದೇ ? "

" ನಿಮ್ಮ ತಾಯಿ ತೀರಿಕೊಂಡು ವರುಷವಾಯಿತು "

ಆಗ ದಿನಕರನಮ ತುಂಬಿದಮನೆ. ದಿನವೂ ರಾತ್ರಿಯೂ ಯಾವುದರ ಪರವೆಯಿಲ್ಲದೆ ಇಸ್ಪೀಟು ಆಡುವ ಗೆಳೆಯರು. ಚಹಾ–ಬೀಡಿ–ಸಿಗರೇಟಿನ ಸಮಾರಾಧನೆ. ಸದಾ ಮಾತು ಉಕ್ಕಿಸುತ್ತಿದ್ದ ಆ ಸ್ನೇಹಿತರ ನೆರವಿಯೂ ದಿನ ಕರನ ಮನವನ್ನು ತುಂಬಲಾರದೆ ಹೋಯಿತು. ಆ ಗದ್ದಲದಲ್ಲಿಯೂ ದಿನಕರ ಒಬ್ಬನೇ ಒಬ್ಬ. ಇವನನ್ನು ಯಾರೊಬ್ಬರೂ ಏನೊಂದನ್ನೂ ಕೇಳಿದವರೇ ಅಲ್ಲ. ಅದು ಅವನ ಮನೆಯೆಂದೂ ಅವರು ಚಿಂತಿಸರು. ಆ ಮನೆಗೆ ದಿನ ಕರನೂ ತಮ್ಮಂತೆ ಒಬ್ಬ ಸದಸ್ಯನೆಂಬಂತೆಯೇ ಅವರ ನಡವಳಿಕೆ.

ತಾಯಿಯ ಅನಂತವಾದ ಪ್ರೇಮದ ರಕ್ಷೆಯಲ್ಲಿದ್ದ ದಿನಕರ ಈ ಹೃದಯಹೀನ, ವ್ಯಸನಾಧೀನ ಜನರ ನೆರವಿಯಿಂದ ಬೇಸತ್ತ. ಊಟ ವಾಯಿತೇ—ಎಂದು ಕೇಳುವವರೂ ಇಲ್ಲ. ನಿದ್ರೆಗೇ ಅವಕಾಶಕೊಡುವದಿಲ್ಲ. ಇವರನ್ನೆಲ್ಲ ಹೊರದೂಡಿ ತನ್ನನ್ನು ಆ ಗದ್ದಲದಿಂದ ಕಾಪಾಡಿಕೊಳ್ಳಬೇಕೆಂದು ಒಮ್ಮೆ ನಿರ್ಧರಿಸಿದ.

ಆದರೆ ಅದಕ್ಕೆ ಅವಕಾಶವೇ ಆಗಲಿಲ್ಲ. ದಿನಕರನಿಗೆ ಧಾರವಾಡಕ್ಕೆ ವರ್ಗವಾಯಿತು. ಆಗ ಕಣ್ಣು ತೆರೆದ ಗೆಳೆಯರು ' ಸಾಹೇಬರಿಗೆ ಹೇಳಿಕೋ, ಇಲ್ಲೇ ಉಳಿಸಬಹುದು ' ಎಂದರು. ದಿನಕರನಿಗೆ ಇದ್ದೂರ ವಾತಾವರಣ ಬೇಸರ ತಂದಿತ್ತು. ಸ್ಥಳ ಬದಲಾವಣೆ ಬಯಸಿತ್ತು ಮನಸ್ಸು. ವರ್ಗವಾದು ದನ್ನವನು ಸಮಾಧಾನದಿಂದ ಸ್ವಾಗತಿಸಿದ.

ಅವನ ಮನೆಯಲ್ಲಿಯೇ ಪಾರ್ಟಿ ಮಾಡಿಸಿ ಗೆಳೆಯರು ಬೀಳ್ಕೊಟ್ಟರು. ಈಗ ಅದು ದಿನಕರನ ಮನೆಯಲ್ಲ; ಗೆಳೆಯರ ಕ್ಲಬ್ಬು.

* * * *

ಬೆಳಗಾವಿ ಬಿಡುವಾಗ ದಿನಕರನಿಗೆ ಒಂದು ಸಂಬಂಧ ಕುದುರಿತು. ಇವನ ಆಫೀಸಿನಿಂದ ಅದೇ ನಿವೃತ್ತರಾದ ವೆಂಕಟರಾಯರು ಮಗಳ ಮದು ವೆಗೆ ಕೈಚೆಲ್ಲಿ ಕುಳಿತವರು, ' ಧಾರವಾಡಕ್ಕೆ ವರ್ಗವಾಗಿ ಹೋಗುವ ದಿನಕರ ಯಾಕೆ ತಮ್ಮ ಅಳಿಯನಾಗಬಾರದು ? ' ಎಂದು ಯೋಚಿಸಿದರು. ದಿನಕರನ ತಂದೆ ವ್ಯಸನಿಯಾಗಿ ಮನೆ ಹಾಳುಮಾಡಿಕೊಂಡುದನ್ನು ಅವರು ಬಲ್ಲರು. ಅವನ ತಾಯಿ ಅಡಿಗೆ-ನೀರುಮಾಡಿ ಮಗನನ್ನು ಬೆಳಸಿದ್ದನ್ನೂ ಅವರು ಅರಿಯ ದವರೇನಲ್ಲ. ಆದರೆ ಅವೆಲ್ಲ ಈವರೆಗೆ ಅಡ್ಡಿಯಾಗಿದ್ದ ವಿಷಯಗಳು ತಮ್ಮ

ನಿವೃತ್ತಿಯಿಂದ, ಅವನ ವರ್ಗದಿಂದ,—ಮೇಲಾಗಿ ತಾಯಿಯಿಲ್ಲದ ತಬ್ಬಲಿ ಕಮಲೆ ಬೆಳೆದು ಬೆಟ್ಟವಾದ ಕಾರಣದಿಂದ ಒಂದೊಂದಾಗಿ ಹೊಂದಿಕೊಂಡು ಬಂದು ಈ ವಿಚಾರಕ್ಕೆ ಎಡೆಮಾಡಿದವು. ಇವನಿಗೆ ಗೆಳೆಯರ ಪಾರ್ಟಿಯಾದ ದಿನವೇ ಅವರಲ್ಲಿ ಈ ವಿಚಾರ ಮಿಂಚಿತು. ಮರುದಿನ ದಿನಕರನನ್ನು ಮನೆಗೆ ಕರೆದರು. ಮಗಳಿಂದ ಚಹಾ ಮಾಡಿಸಿಕೊಟ್ಟರು. ಊಟಕ್ಕೆ ಅಲ್ಲಿಯೇ ನಿಲ್ಲ ಹೇಳಿದರು.

ಎಂದೂ ಇಲ್ಲದ ಈ ಆದರಾತಿಥ್ಯ ದಿನಕರನಿಗೆ ಅಚ್ಚರಿಯೇ ಆಯಿತು. ಒಬ್ಬರಾದರೂ ತನ್ನನ್ನು ಮನೆಗೆ ಕರೆದು ಸತ್ಕರಿಸಿದರಲ್ಲ—ಎಂದು ಸಮಾಧಾನವೂ ಆಯಿತು.

ಅಂದು ಭಾನುವಾರವಾಗಿತ್ತು. ದಿನಕರನಿಗೂ ಆಫೀಸಿನ ಚಿಂತೆಯಿದ್ದಿಲ್ಲ. ವರ್ಗದ ಕಾರಣದಿಂದ ಒಂದು ವಾರದ ರಜವೂ ದೊರೆತಿತ್ತು. ಮಧ್ಯಾಹ್ನ ವೆಂಕಟರಾಯರಲ್ಲಿ ಸಮೀಚೀನ ಭೋಜನವಾಗಿತ್ತು. ತಾಯಿ ಹೋದಮೇಲೆ ಅವನು ತೃಪ್ತಿಯಿಂದ ಉಂಡದ್ದೆಂದರೆ ಅದೇ ಒಂದು ಊಟ.

ಊಟ ಮಾಡಿ, ಕವಳ ಮೆದ್ದು ಹಾಗೇ ಉರುಳಿಕೊಂಡ ದಿನಕರ ಜೊಂಪಿನಲ್ಲಿ ಒಳ್ಳೊಳ್ಳೆಯ ಕನಸು ಕಂಡ. ಮೂರು ಗಂಟೆಗೆ ವೆಂಕಟರಾಯರು ಎಬ್ಬಿಸಿದರು. ಮುಖಕ್ಕೆ ನೀರು ಇಟ್ಟಿತ್ತು. ಟವಲು ಅಲ್ಲೇ ಇತ್ತು. ಚಹವೂ ಬಂತು. ಅದೆಲ್ಲವೂ ಕನಸಿನಂತೆಯೇ ಇತ್ತು ದಿನಕರನಿಗೆ. ವೆಂಕಟರಾಯರು ಆಡಿದ ಒಂದು ಮಾತಿನಿಂದ ಎಚ್ಚರದ ಲೋಕಕ್ಕೆ ಬರುವಂತಾಯಿತು.

" ನಿಮಗೆ ಧಾರವಾಡಕ್ಕೆ ವರ್ಗವಾಯಿತು, ದಿನಕರರಾವ್. ನೀವಿನ್ನು ಹೋಗುವವರು. "

" ಹೌದು " ಎಂದು ನಕ್ಕ ದಿನಕರ.

"ನೀವು ಇಲ್ಲೇ ಇದ್ದಾಗ ಹೇಳದ ಒಂದು ವಿಚಾರ ಇಂದು ನಿಮಗೆ ಹೇಳಬೇಕಾಗಿದೆ. "

" ಹೇಳಿರಿ, ಅದಕ್ಕೇನು ? "

" ನನಗೆ ನಿವೃತ್ತಿಯಾಗಿ ತಿಂಗಳಾಯಿತು. "

" ಹೌದು, ನನಗೆ ತಿಳಿಯದೇ ? "

" ನಿಮ್ಮ ತಾಯಿ ತೀರಿಕೊಂಡು ವರುಷವಾಯಿತು "

ದಿನಕರ ಉತ್ತರಿಸಲಿಲ್ಲ. ಕಣ್ಣಂಚಿನಲ್ಲಿ ನೀರೂರಿತು.

"ಅವರು ನಿಮ್ಮ ತಲೆಯಮೇಲೆ ಅಕ್ಕೀಕಾಳು ಹಾಕಿಯೇ ಕಣ್ಣು ಮುಚ್ಚಬೇಕೆಂದಿದ್ದರು; ನನಗೆ ಗೊತ್ತು."

"ಹೌದು; ಅವಳ ಆಸೆ ಈಡೇರಲಿಲ್ಲ."

"ಇವಳು ನನ್ನ ಮಗಳು—ಕಮಲ. ಇವಳೂ ತಾಯಿಯನ್ನು ಕಳೆದು ಕೊಂಡು ವರುಷವಾಯಿತು."

"ಹೌದು; ಪಾಪ. ಮನೆಯಕೆಲಸವೆಲ್ಲ ಅವರಿಗೇ ಬಿದ್ದಿರಬೇಕು."

"ಬೀಳಲಿ ದಿನಕರರಾವ್, ಅವಳೂ ಇವಳ ತಲೆಯ ಮೇಲೆ ಅಕ್ಕೀ ಕಾಳು ಹಾಕಲಿಲ್ಲ. ಅದೇ ಕೊರಗಿನಲ್ಲಿಯೇ ಕಣ್ಣು ಮುಚ್ಚಿದಳು."

ಬಾಗಿಲಲ್ಲಿ ನಿಂತು ಕೇಳುತ್ತಿದ್ದ ಕಮಲೆ ಅಳುತ್ತಿದ್ದಳು.

"ಹೌದು; ನೀವು ಅವರ ಎದುರಿನಲ್ಲಿಯೇ ಮದುವೆ ಮಾಡ ಬೇಕಾಗಿತ್ತು."

"ದಿನಕರರಾವ್, ಅದು ನಮ್ಮ ಕೈಯಲ್ಲಿಯ ಮಾತೇ? ಅವಳ ಬೇನೆಯ ಆರೈಕೆಯಲ್ಲಿ—ನನ್ನ ಕೆಲಸದಲ್ಲಿ ನಾನು ಆಗ ಅದಕ್ಕೆ ಅಷ್ಟು ಮನಸ್ಸು ಹಾಕಲಿಲ್ಲ."

"ನೀವು ಮನಸ್ಸು ಮಾಡಬೇಕಾಗಿತ್ತು."

"ಇರಲಿ; ಅದು ಆಗಿಹೋಯಿತು. ಈಗ ನೀವು ದೊಡ್ಡ ಮನಸ್ಸು ಮಾಡಿದರೆ—ನನ್ನದೊಂದು ಭಾರವಿಳಿಯುತ್ತದೆ."

ಕಮಲೆ ಒಳಗೆ ಸರಿದಳು.

"ನಾನೇನು ಮನಸ್ಸು ಮಾಡಬೇಕೆನ್ನುತ್ತೀರಿ? ನೀವು ಹಿರಿಯರು; ಅನುಭವಿಕರು."

"ಅಂತೇ ನಿಮಗೆ ಹೇಳುತ್ತೇನೆ. ನೀವು ಕಮಲೆಯನ್ನೊಪ್ಪಿ ಕೈ ಹಿಡಿದರೆ...."

"ನೀವು ನನ್ನನ್ನೇ ಕೇಳುವಿರಾ?" ಎನ್ನುತ್ತ ದಿನಕರ ನಗಲೆತ್ನಿಸಿದ.

"ಹೌದು; ನಿಮ್ಮನ್ನೇ ಕೇಳಿದ್ದು. ನೀವು ಒಪ್ಪಿಬಿಡಿ, ಮುಂದಿನದೆಲ್ಲ ನನಗೆ ಕೂಡಿತು. ನೋಡಿ—ಅವಳಿಗೀಗ ಹದಿನಾರುವರುಷ. ತಾಯಿ ಬೇನೆ ಬಿದ್ದಾಗಿನಿಂದ ಮನೆಯನ್ನು ಅವಳೇ ನಡೆಸಿದ್ದಾಳೆ. ಅವಳು ಜಡ್ಡು

ಬಿದ್ದಾಗಲೇ ಇವಳನ್ನು ಶಾಲೆಯಿಂದ ಬಿಡಿಸಬೇಕಾಯಿತು. ಇಂಗ್ಲಿಷ ನಾಲ್ಕನೆಯ ಕ್ಲಾಸಿನಲ್ಲಿದ್ದಳು....ಏನೆನ್ನುತ್ತೀರಿ ದಿನಕರರಾವ್ ?"

ದಿನಕರ ಸುಮ್ಮನೇ ಇದ್ದ.

"ನಾನು ಒಪ್ಪಿಗೆಯೆಂದು ತಿಳಿದು ಮುಂದಿನ ಕೆಲಸ ನಡೆಸುತ್ತೇನೆ, ದಿನಕರರಾವ್. ನಿಮಗೂ ಮತ್ತೆ ಯಾರೂ ಇಲ್ಲ—ನಾನು ಬಲ್ಲೆ. ನಿಮಗೂ ನಾನೇ ಹಿರಿಯನೆಂದು ನೀವು ಒಪ್ಪಿಕೊಂಡರೂ ಸಂತೋಷ."

"ವಿಚಾರಮಾಡಿ ಹೇಳುತ್ತೇನೆ."

"ಇನ್ನೇನು ವಿಚಾರ ಮಾಡುತ್ತೀರಿ ? ನಿಮಗೆ ವರ್ಗವಾಗಿದೆ. ನಿಮ್ಮ ಮನೆ ಅಡ್ಡೆಯಾಯಿತು—ನಾನು ಬಲ್ಲೆ. ಧಾರವಾಡದಲ್ಲಾದರೂ ನಿಮ್ಮದು ಮನೆಯಾಗಲಿ. ಒಂದು ಒಳ್ಳೆಯ ಮನೆ ನೋಡಿಬಿಡಿರಿ.

"ಕಮೂ ಇನ್ನೊಮ್ಮೆ ಚಹಾ ಮಾಡುವೆಯಾ ?" ಎನ್ನುತ್ತ ಒಳಗೆ ಹೋದರು. ದಿನಕರ ಜಂತೆ ಎಣಿಸತೊಡಗಿದ.

ಕಮಲೆ ಒಳಗೆ ಕುಳಿತು ಅಳುತ್ತಿದ್ದಳು. "ಛೀ, ಹುಚ್ಚೀ" ಎಂದ ವೆಂಕಟರಾಯರು ಹೊರಗೆ ಬಂದು, "ಒಳಗೇ ಬರ್ರಿ, ದಿನಕರರಾವ್" ಎಂದರು.

"ಇರಲಿ; ಯಾಕೆ—" ಎನ್ನುತ್ತ ದಿನಕರ ಎದ್ದು ಮೆಲ್ಲನೆ ಒಳಕ್ಕೆ ನಡೆದ. ನಡುಮನೆಯಲ್ಲಿ ಕುಳಿತ ಕಮಲೆ ಮೇಲಕ್ಕೆದ್ದು ಅಡಿಗೆ ಮನೆಗೆ ನಡೆದಳು. ವೆಂಕಟರಾಯರು ದಿನಕರನ ಕೈಹಿಡಿದುಕೊಂಡೇ ಅವಳನ್ನು ಹಿಂಬಾಲಿಸಿದರು.

"ದಿನಕರರಾವ್, ಕಮಲೆಗೆ ತಾಯಿಯ ನೆನಪಾಗಿದೆ; ಅದಕ್ಕೆ ಅಳುತ್ತಿದ್ದಾಳೆ. ನನಗಾದರೂ ಯಾರಿದ್ದಾರೆ ? ಇದ್ದೊಬ್ಬ ಗಂಡುಮಗನನ್ನು ಕಳೆದುಕೊಂಡಿರುವೆ. ಇದ್ದರೆ ಅವನೂ ನಿಮ್ಮಷ್ಟು ದೊಡ್ಡ ಮಗ. ಇವಳ ಮದುವೆ ಮಾಡಿಕೊಟ್ಟ ಮೇಲೆ ನನಗೆ ಇನ್ನೇನಿದೆ?—ಕಾಶಿಯೋ-ರಾಮೇಶ್ವರವೋ!" ಎಂದು ಅವರೂ ಅಳಹತ್ತಿದರು.

"ಇರಲಿ ವೆಂಕಟರಾವ್" ಎನ್ನುತ್ತ ದಿನಕರನೂ ತನಗೇ ತಿಳಿಯದಂತೆ ಅಳುತ್ತಿದ್ದ. ಅವನಿಗೂ ತಾಯಿಯ ನೆನಪಾಗಿತ್ತು. ಅವಳಿದ್ದಾಗ ಇವರು ಎಲ್ಲಿದ್ದರು—ಎಂದೊಮ್ಮೆ ಯೋಚಿಸಿದ: "ಅದು ನಮ್ಮ ಕೈಯಲ್ಲಿಯ ಮಾತೇ" ಎಂಬ ವೆಂಕಟರಾಯರ ಮಾತನ್ನು ಮನಸ್ಸಿನಲ್ಲಿಯೇ ಜಪಿಸುತ್ತಿದ್ದ.

ಅಡಿಗೆಮನೆಯಲ್ಲಿಯೇ ದೇವರ ಜಗುಲಿ. ವೆಂಕಟರಾಯರು ಅದರ ಎದುರು ಬಂದು ನಿಂತವರು ಅಡ್ಡಬಿದ್ದು ಕೈ ಮುಗಿದು--

" ಕಮೂ, ರಾಯರಿಗೆ ನಮಸ್ಕಾರ ಮಾಡು " ಎಂದರು.

ದಿನಕರ ಹಾಗೇ ನಿಂತಿದ್ದ.

೩

ಧಾರವಾಡಕ್ಕೆ ವರ್ಗವಾಗಿ ಬಂದ ದಿನಕರ ಮನೆಗಾಗಿ ಪರಿದಾಡಿದ. ಸರಕಾರಿ ಕಚೇರಿಯಲ್ಲಿದ್ದ ಇವನಿಗೆ ಅಲ್ಲೊಂದು ಇಲ್ಲೊಂದು ಮನೆ ನೋಡಲು ಸಿಗುತ್ತಿದ್ದವು. ಗೃಹಲಕ್ಷ್ಮಿಯನ್ನು ಪ್ರತಿಷ್ಠಿಸಬೇಕಾಗಿದ್ದ ಇವನಿಗೆ ಯಾವ ಸ್ಥಳ ಅನೂಕೂಲವಾದೀತೆಂಬ ನಿರ್ಣಯ ತೆಗೆದುಕೊಳ್ಳಲು ಪೇಚಾಟವೇ ಆಯಿತು. ಇನ್ನೂ ಮದುವೆಯ ದಿನ ಮುಂದಿದೆ. ಕಮಲೆಯನ್ನೇ ಕೇಳುವಂತಿಲ್ಲ. ಇಂದಿಲ್ಲ ನಾಳೆ ಬರಲಿರುವ ಆಕೆಯನ್ನು ಕೇಳಿದರೇನು ತಪ್ಪು-ಎಂದುಕೊಳ್ಳುವ. ಮರುಕ್ಷಣ ಆದೇ ಕಾರಣವಾಗಿ ಈ ಸಂಬಂಧವೂ ಕೈಬಿಟ್ಟೀತೆಂದು ಹಿಂಜರಿಯುವ.

ಮಗಳ ಮದುವೆಯ ಸನ್ನಾಹದಲ್ಲಿದ್ದ ವೆಂಕಟರಾಯರು ಇವನಿಗೆ ಮನೆ ದೊರೆಯುವದೂ ಒಂದು ಆ ಕೆಲಸದಲ್ಲಿಯ ಭಾಗವೆಂದೇ ತಿಳಿದಿದ್ದರು. ಆಗಾಗ 'ಮನೆ ಸಿಕ್ಕಿತೇ' ಎಂದು ಬರೆಯುತ್ತಿದ್ದರು. ಒಮ್ಮೆ ಉತ್ತರಿಸುವಾಗ ಅವರಿಗೇ 'ಎಲ್ಲಿ ಮನೆನೋಡಲಿ'—ಎಂದು ಬರೆದು ಕೇಳಿದ. 'ನಾನು ನೋಡಿದ ಮನೆ ಬರುವ ಮನೆಯಾಕೆಗೆ ಸಮ್ಮತವಾಗಬೇಕಲ್ಲ'—ಎಂದ. ವೆಂಕಟರಾಯರು 'ಒಂದು ಮನೆಯಾದರಾಯಿತು. ನೀವು ಕರೆದಲ್ಲಿ ಕಮಲೆ ಬರುತ್ತಾಳೆ. ಅಂಥಲ್ಲಿ ಇಂಥಲ್ಲಿ ಎಂದು ಕಾಲಕಳೆಯಬೇಡಿ. ಯಾವುದಾದರೊಂದು ಎಲ್ಲಾದರೊಂದು ಹಿಡಿದುಬಿಡಿ'—ಎಂದರು.

ಮನೆಯ ನೆಪದಿಂದ ಒಮ್ಮೆ ಕಮಲೆಯನ್ನು ಧಾರವಾಡದಲ್ಲಿ ನೋಡಬೇಕೆಂಬ ದಿನಕರನ ಸುಪ್ತ ಆಸೆಗೆ ಆಹಾರ ದೊರೆಯಲಿಲ್ಲ. ಹೌದು; ಮನೆ ನೋಡಲು ಬಂದರೆ ಎಲ್ಲಿ ಅವಳನ್ನು ಇಳಿಸಿಕೊಳ್ಳಬೇಕು—ಎಂದೂ ಒಂದು ಶಂಕೆ !

ಮಾಳಮಡ್ಡಿಯಲ್ಲಿಯೇ ಒಂದು ಉಪ-ಗೃಹ ನೋಡಿದ; ಹಿಡಿದೂ ಬಿಟ್ಟ. ಮಾಳಮಡ್ಡಿಯ ಏರಿಳಿತಗಳಂತೆ ಅವನ ಮನಸ್ಸೂ ಏರಿಳಿಯುತ್ತಿತ್ತು. ಕಮಲೆಯ ಸ್ವಾಗತಕ್ಕೆ ಏನೇನು ಅಣಿಯಾಗಬೇಕೆಂದು ಅವನಿಗೆ ತಿಳಿಯದು. ದಿನಾ ಬೆಳಗಾದರೆ ಪೇಟೆಗೆ ಹೋಗಿ ಏನೇನೋ ಸಾಮಾನು ತಂದು ಹಾಕುವ. ತಾಯಿಯ ನೆನಪು ಬಲವಾಯಿತು. ಗೆಳೆಯರು ಯಾರೂ ಇದ್ದಿಲ್ಲ. ಹುಬ್ಬಳ್ಳಿ ಹಾದಿ ಸವೆಸುವದು ಅವನ ದಿನದ ಕೆಲಸವಾಯಿತು.

ವೆಂಕಟರಾಯರು ಮದುವೆಗೆ ಇನ್ನೂ ಸಮಯ ತಿಳಿಸಲಿಲ್ಲ. ಮನೆ ಹಿಡಿದಾಯಿತು. ಇನ್ನೇನು ಕಮಲೆ ಬಂದುಬಿಡುತ್ತಾಳೆಂದಿದ್ದ ದಿನಕರನಿಗೆ ನಿರ್ಜೀವ ವಸ್ತುಗಳನ್ನು ಕೊಂಡು ತಂದು ತುಂಬಿದ ಮನೆ ಭಣಗುಡುತ್ತಿತ್ತು. ವೆಂಕಟರಾಯರಿಗೆ ಅವಸರಪಡಿಸಬೇಕೆಂದರೆ—ಏನೆಂದು ಹೇಗೆ ಒತ್ತಾಯ ಮಾಡಬೇಕು ?

ಬೆಳಗಾವಿಯಲ್ಲಿ ಮನಸಿಲ್ಲದಿದ್ದರೂ ಕಲಿತು ಆಡಿದ ಇಸ್ಪೀಟು ಆಟಕ್ಕೆ ಇಲ್ಲಿ ಅವನ ಕೈ ತುರಿಸತೊಡಗಿತು. ಒಂದು ದಿನ ಕ್ಲಬ್ಬಿಗೆ ಹೋಗಿ ಹೆಸರು ಹಚ್ಚಿಸಿ ನಾಲ್ಕು ಆಟ ಬ್ರಿಜ್ ಆಡಿ ಬಂದ. ದಿನ ದಿನಕ್ಕೆ ಅದೇ ಸೆಳೆತ ಜೋರಾಗಿ ಹುಬ್ಬಳ್ಳಿಯ ದಾರಿಯ ನೆಲ ಇವನನ್ನು ಕಾಯುವಂತಾಯಿತು. ಮನೆಗೂ ಕ್ಲಬ್ಬಿನ ಬಾಗಿಲು ಹಾಕಿದ ಮೇಲೆಯೇ ಇವನ ಭೆಟ್ಟಿ.

ಬೆಳಗಾವಿಯಿಂದ ಒಮ್ಮೆ ಬಂದ ವೆಂಕಟರಾಯರು ಇವನ ಮನೆ ಪತ್ತೆ ಮಾಡಿ ಅದರ ಬಾಗಿಲಿಗೆ ಕುಳಿತು ಬೇಸತ್ತು ತಮ್ಮ ಸ್ನೇಹಿತನ ಮನೆಗೆ ಹೋಗುವಂತಾಯಿತು. ಮರುದಿನ ದಿನಕರನನ್ನು ನೋಡುವಾಗ ನಿದ್ರೆಯಿಲ್ಲದ ಕಣ್ಣುಗಳು, ಸೊರಗಿದ ದೇಹವನ್ನೇ ಕಂಡರು.

" ಯಾಕೆ ದಿನಕರರಾವ್, ಮೈಯಲ್ಲಿ ನೆಟ್ಟಗಿಲ್ಲವೇ ?" ಎಂದು ಕೇಳಿದರು. ' ನನಗೇನಾಗಿದೆ ?' ಎಂದು ದೇಶಾವರಿ ನಗೆ ನಕ್ಕ.

ವೆಂಕಟರಾಯರು ಮದುವೆಯ ದಿನ ಹೇಳಲೆಂದೇ ಬಂದಿದ್ದರು. ಬೆಳಗಾವಿಯಲ್ಲಿಯೇ ಮದುವೆಯೆಂದಾಗ ದಿನಕರ ಎಲ್ಲಿಯಾದರೂ ದೇವಸ್ಥಾನದಲ್ಲಾದರೆ ಹೇಗೆ— ಎಂದು ಸೂಚಿಸಿದ. ಬಳಗವಿಲ್ಲದ ಅವನ ಸೂಚನೆ ಮನೆಯಲ್ಲಿ ಮಡದಿಯಿಲ್ಲದ ವೆಂಕಟರಾಯರಿಗೆ ವಿಚಾರಣೀಯವೆನಿಸಿದರೂ ಯಾರು

ಯಾರನ್ನೋ ಕರೆದು ತನ್ನ ಮದುವೆಗೆ ತಾನೇ ಸೌರಿಸಿಕೊಂಡ ಕಮಲೆಯನ್ನು ಎಲ್ಲೋ ದೇವರ ಗುಡಿಯಲ್ಲಿ ಧಾರೆಯೆರೆಯುವದು ಸಮ್ಮತವಾಗಲಿಲ್ಲ.

* * * *

ಮದುವೆಯಲ್ಲಿ ದಿನಕರನಿಗೆ ತನ್ನ ಮನೆಯಲ್ಲಿ ಕ್ಲಬ್ಬುಮಾಡಿಕೊಂಡ ಗೆಳೆಯರೇ ಬಳಗ. ಅದೇ ಅವನ ಬಿಡಾರವಾಯಿತು. ಇವನ ದೂರದ ಸಂಬಂಧಿ ಗೋಪಾಲರಾಯ ಹೆಂಡತಿಯೊಡನೆ ಬಂದು ದಿನಕರನ ಮದುವೆ ನಡೆಸಿದ. ಅವನಿಗಿಂತ ಹತ್ತಿರದವರು ಇದ್ದರಾದರೂ ಅವರನ್ನು ಮದುವೆಗೆ ಕರೆತರುವದು ದಿನಕರನಿಗೆ ಯಾಕೋ ರುಚಿಸಲಿಲ್ಲ. ಗೆಳೆಯರ ಕೋಲಾಹಲ ದಿಂದ ಇವನಿಗೆ ಬಳಗವಿಲ್ಲದವನೆಂಬಂತೆನಿಸಲೇ ಇಲ್ಲ. ಸ-ಕುಟುಂಬ ವಾಗಿಯೇ ಅವರು ಇವನ ಮದುವೆಯಲ್ಲಿ ಭಾಗವಹಿಸಿದರು. ಅವರಲ್ಲಿಯೇ ಅಕ್ಕ-ತಂಗಿಯರನ್ನು, ಅಣ್ಣ-ತಮ್ಮಂದಿರನ್ನು ದಿನಕರ ಕಾಣುವಂತಾಯಿತು.

ಧಾರೆಯ ನಂತರ ತನ್ನ ಮನೆಗೆ ಕಮಲೆಯವನ್ನು ಕರೆತರುವಾಗ ವೆಂಕಟ ರಾಯರ ಅಪ್ಪುಗೆಯಿಂದ ಅವಳನ್ನು ಕಿತ್ತುಕೊಂಡೇ ಬರಬೇಕಾಯಿತು. ತಾಯಿ ಯಿಲ್ಲದ ಅವಳಿಗೆ ವೆಂಕಟರಾಯರೇ ಎಲ್ಲಆಗಿದ್ದರು. ಅಣ್ಣ-ತಮ್ಮಂದಿರೂ ಇಲ್ಲ. ಮದುವೆಯ ದಿಬ್ಬಣಕ್ಕೆ ಬಂದ ಹಲವರಲ್ಲಿ ಯಾರೂ ಅವಳಿಗೆ ಹತ್ತಿರದವರಾಗಿ ಕಾಣಲಿಲ್ಲ. ಆ ತಂದೆಯನ್ನು ಒಂಟಿಯಾಗಿ ಬಿಟ್ಟು, ಆ ಮನೆಯನ್ನು ತೆರವು ಮಾಡಿದಂತಾಯಿತು ಅವಳಿಗೆ. ವೆಂಕಟರಾಯರಿಗೆ ಏನೊಂದು ಆಡಲೂ ಮಾತು ಬರದು. ಮಗಳೊಡನೆ ತಾವೂ ಅಳುವದೊಂದೇ ಕೆಲಸವಾಯಿತು. ದಿನಕರ ಸಮಾಧಾನವನ್ನು ಬಾಯಲ್ಲಿ ಹೇಳಲಾರದಾದ. ಅವರಿಗೆ ರಕ್ಷೆಯ ಭರವಸೆಯನ್ನು ಅವನ ಮನಸ್ಸು ಕೋರುತ್ತಿತ್ತು. ಅದನ್ನೇ ಹೇಳಲು ಬಾಯಿ ಬರದು. ಕಮಲೆ 'ಅಪ್ಪಾ, ನೀನೂ ಬಾ' ಎಂದು ಹೇಳಿದಾಗ ದಿನಕರ 'ಹೌದು; ಅವರೂ ಬರಬೇಕು' ಎಂದುಕೊಂಡು, "ನನಗಾದರೂ ಯಾರಿ ದ್ದಾರೆ ? ನೀವೂ ಬಂದು ನಮ್ಮೊಂದಿಗೆ ಇದ್ದು ಬಿಡಿ" ಎಂದ. "ದಿನಕರ ರಾವ್ ಅದು ಲೌಕಿಕವಲ್ಲ" ಎಂದು ವೆಂಕಟರಾಯರು ಕಣ್ಣೊರಸಿ ಕೊಂಡರು.

ಇದೇ ಸಮಯವೆಂದು ಮದುವೆಗೆ ಬಂದ ದಿನಕರನ ಸಂಬಂಧಿ ಗೋಪಾಲರಾಯ ತನ್ನ ಮಡದಿ-ಮಕ್ಕಳೊಡನೆ ಹೊರಟೇ ಬಿಟ್ಟ. ದಿನಕರ

‘ ನಿಮ್ಮಿಷ್ಟ’ ಎಂದು ಕೈ ಕೊಡವಿದ. ಆದರೆ ವೆಂಕಟರಾಯರು ಮುಂದೆ ಬಂದು ಗೋಪಾಲರಾಯರಿಗೆ, “ಎಷ್ಟಾದರೂ ನೀವು ದಿನಕರರಾಯರಿಗೆ ಬಳಗ” ಎಂದು ಹೇಳಿ ಧಾರವಾಡಕ್ಕೆ ಕಮಲೆಯನ್ನು ಕರೆದುಕೊಂಡು ಹೋಗಿ ಅವರ ಮನೆಯಲ್ಲಿಳಿಸಿ ಹೋಗುವ ಕರ್ತವ್ಯ ಸೂಚಿಸಿದರು. ನಿಮಿತ್ತ ಕ್ಕಾಗಿ ಗೋಪಾಲರಾಯ ಸಮ್ಮತಿಸಿದರೂ ಅವನ ಮನೆಯಾಕೆಯನ್ನು ಒಪ್ಪಿಸಬೇಕಾದರೆ ವೆಂಕಟರಾಯರು ಒಂದು ‘ ಸೀರೆ ’ಯನ್ನು ‘ ಓದಿ’ಸ ಬೇಕಾಯಿತು.

ವೆಂಕಟರಾಯರ ಗೃಹವೃಕ್ಷಕ್ಕೆ ಹಬ್ಬಿದ ಬಳ್ಳಿಯಾದ ಕಮಲೆಯನ್ನು ದಿನಕರ ಉಪಾಯವಾಗಿ ತನ್ನ ಮನೆಗೆ ತೊಡಗಿಸಬೇಕಾಗಿತ್ತು. ಇಲ್ಲಿ ಕರ್ಮ–ಧರ್ಮಗಳೇ ಉಪಾಯವಾಗಿ ಬರಬೇಕಷ್ಟೆ.

## ೪

ದಿನಕರನ ಮಾಳಗುಡ್ಡದ ಬಾಡಿಗೆ ಮನೆ ದಿಬ್ಬಣಿಗರೆಲ್ಲ ಹೋಗಿ ತೆರ ವಾಗಿದೆ. ಉಳಿದವರೆಂದರೆ ಕಮಲೆ, ದಿನಕರ.

ದಿನಕರ ಬೆಳಿಗ್ಗೆ–ನಸುಕಿನಲ್ಲಿ ಎಂದೂ ಎದ್ದವನಲ್ಲ. ಈಗಂತೂ ಕಮಲೆ ಯನ್ನು ಸರಿರಾತ್ರಿವರೆಗೆ ಕಾಡುವ ಅವನಿಗೆ ಸೂರ್ಯೋದಯ ಎಂಟುಗಂಟೆಗೇ. ಎದ್ದವನಿಗೆ ಈಗ ಹಾಸಿಗೆಯಲ್ಲೇ ಚಹಾ ಬೇಕು; ಇಲ್ಲವೇ ಚಹಾ ಬಂದೇ ಅವನನ್ನು ಎಬ್ಬಿಸಬೇಕು. ಮೊದಲಾದರೆ ತಾನೇ ಚಹಾಮಾಡಿಕೊಂಡು ಹಾಸಿಗೆಯ ಮೇಲೆ ಕುಳಿತು ಕುಡಿಯುತ್ತಿದ್ದ. ಕಮಲೆಗೆ ತಂದೆಯ ಮನೆಯಲ್ಲಿ ಕೆಲಸ ಕಾರ್ಯಗಳಿಗಾಗಿ ನಸುಕಿನಲ್ಲೇ ಎದ್ದು ಅಭ್ಯಾಸವಿದೆ. ಅದೇ ಬಂದಾಗ ಮೊದಲೆರಡುದಿನ ಎದ್ದವಳೇ ಚಹಾಮಾಡಿ ದಿನಕರನನ್ನೆಬ್ಬಿಸಿದಳು. ದಿನಕರ ಚಹಾ ಬಸಿದುಕೊಂಡು ಕಮಲೆಯನ್ನು ಕೆಲಸಕ್ಕೇ ಬಿಡಲಿಲ್ಲ. ಅವಳನ್ನು ಮುಂದೆ ಕೂಡಿಸಿಕೊಂಡು ನೋಡಿದಷ್ಟೂ ಅವನಿಗೆ ತೃಪ್ತಿಯಿಲ್ಲ. ಅವಳು ಎದ್ದರೆ ಅವಳ ಹಿಂದೆ ಹಿಂದೆ ಅಳುವ ಕೂಸಿನಂತೆ ಬೆಂಬತ್ತಿ ಅವಳ ಕಾಲಲ್ಲೇ ಸುಳಿಯುತ್ತಾನೆ. ಕಮಲೆ ಮನೆಕೆಲಸಗಳನ್ನು ಹೇಗೆಮಾಡಿಯಾಳು—ಎಂದು ಅವನು ಯೋಚಿಸುವದೇ ಇಲ್ಲ. ಮೂರನೆಯ ದಿನ ಚಹಾ ತಂದು ಎಬ್ಬಿಸಿದರೂ

ನಿದ್ರೆಯ ಭಾರದಲ್ಲಿ ಅವನು ಏಳಲೇ ಇಲ್ಲ. ಕಣ್ತುಂಬ ನಿದ್ರೆಮಾಡಲಿ ಎಂದು ಕಮಲೆಯೂ ತನ್ನ ಕೆಲಸದಲ್ಲಿ ತೊಡಗಿದಳು. ಇಬ್ಬರೇ ಇರುವ ಮನೆಯಲ್ಲಿ ಏನು ಅಂಥ ಕೆಲಸವೋ–ಹುಡುಕಿಕೊಂಡು ಕಮಲೆ ದುಡಿಯುತ್ತಾಳೆ. ಉಡುಗಿದ ಮನೆಯನ್ನೆ ಉಡುಗುತ್ತಾಳೆ. ಬೆಳಗಿದ ಪಾತ್ರೆಯನ್ನೆ ಬೆಳಗುತ್ತಾಳೆ. ತನ್ನ ಕೆಲಸ ತೀರಿಸಿಯೇ ಪತಿಯನ್ನೆಬ್ಬಿಸುತ್ತಾಳೆ. ಎದ್ದ ಅವನ ಮುಂದೆ ತಾನಾಗಿ ಕೂತುಬಿಡುತ್ತಾಳೆ. ಮುಂದೆ ಒತ್ತಾಯದ ಪ್ರಾತರ್ವಿಧಿಗೆ ಅವನೆದ್ದಾಗ ಅಡಿಗೆಯ ಕೆಲಸಕ್ಕೆ ತೊಡಗುತ್ತಾಳೆ. ದಿನಾ ಎಂಟಕ್ಕೆ ಚಹಾ; ಹತ್ತಕ್ಕೆ ಊಟ. ಮುಂದೆ ಅರ್ಧಗಂಟೆ ಕಮಲೆಯ ಮುಂದೆ ಕುಳಿತು ದಿನಕರ ಕಿತ್ತಲಾರದ ಕಾಲುಗಳನ್ನು ಎಳೆದುಕೊಂಡು ಆಫೀಸಿಗೆ ಹೊರಡುತ್ತಾನೆ.

ದಿನಕರ ಕಚೇರಿಗೆ ಹೋದನೆಂದರೆ ಮನೆಯಲ್ಲಿ ಕಮಲೆ ಒಬ್ಬಳೇ ಒಬ್ಬಳು. ಒಂದು ಗಂಟೆಯಲ್ಲಿ ಕೆಲಸ ಮುಗಿದು ಸಂಜೆಯ ಆರರ ವರೆಗೆ ಇಡೀ ಹಗಲು ಭಾರವಾಗಿಬಿಡುತ್ತದೆ. ಮಧ್ಯಾಹ್ನ ಮಲಗಿ ಅವಳಿಗೆ ಅಭ್ಯಾಸವಿಲ್ಲ. ಆಲಸ್ಯಕ್ಕೆ ಮಲಗಿದರೂ ಕಣ್ಣು ಕೂಡುವದಿಲ್ಲ. ತೆರೆದ ಕಣ್ಣುಗಳಿಂದ ಗೋಡೆಗಳನ್ನು ನೋಡುತ್ತ ಅಲ್ಲಿ ದಿನಕರನನ್ನು ಚಿತ್ರಿಸಿಕೊಳ್ಳುತ್ತಾಳೆ. ಅವನನ್ನು ಎಷ್ಟು ಸಲ ನೆನಪಿಸಿಕೊಂಡರೂ ಅವಳಿಗೆ ಸಾಕಾಗದು. ಗಡಿಯಾರದ ಮೇಲೆಯೇ ಕಣ್ಣು. ಅದು ತನ್ನನ್ನು ಸಾವಧಾನದಿಂದ ನಡೆಸಿಕೊಂಡು ಹೋಗುತ್ತದೆ. ನಿಂತುಹೋಗಿದೆಯೋ ಎಂದು ಶಬ್ದಿಸುವ ಅದಕ್ಕೆ ಕಿವಿ ಹಚ್ಚಿ ನೋಡುತ್ತಾಳೆ. ಪತಿಯ ಆಫೀಸಿನ ಗಡಿಯಾರವಾದರೂ ಚಟುವಟಿಕೆ ತೋರಬಾರದೇ ಎನ್ನುತ್ತಾಳೆ. ಅವನಿದ್ದಾಗ ಕೆಲಸವನ್ನೇ ಮಾಡಬಾರದೆಂದೂ ಅವನು ಬರುವವರೆಗೆ ಕೆಲಸವಿರಬೇಕೆಂದೂ ಆಲೋಚಿಸುತ್ತಾಳೆ. ಆದರೆ ಆಗುವ ಕೆಲಸ ಅವನಿಗಾಗಿಯೇ ಹತ್ತುಗಂಟೆಯ ಮುನ್ನ ಆಗಬೇಕು. ಮುಂದೆ ಅವನ ಬಟ್ಟೆ-ಬರೆ ಹೊಂದಿಸುವದು; ಹಾಸಿಗೆ ಕೊಡವಿ ಹಾಸುವದು ಇವಿಷ್ಟೇ ಕೆಲಸ. ಮಧ್ಯಾಹ್ನದ ಚಹಾಕ್ಕಾದರೂ ಪತಿ ಬಂದರೆ ಒಳ್ಳೆಯದು ಎನ್ನುತ್ತಾಳೆ. ಆದರೆ ಕಚೇರಿ ದೂರ.

ಒಂದು ದಿನ ಇವಳು ಹಗಲು ಎಚ್ಚರದಲ್ಲೇ ಮಲಗಿದಾಗ ದಿನಕರ ಬಂದು ಬಾಗಿಲು ಬಡಿದ. ಅವನನ್ನು ನಿರೀಕ್ಷಿಸದಿದ್ದ ಕಮಲೆ ಕೂಡಲೆ ಬಾಗಿಲಿಗೆ ಬರಲಿಲ್ಲ. ' ಕಮಲ, ಕಮಲ '–ಎಂದು ಅವನು ಕೂಗುತ್ತಲೇ

ಇದ್ದಾನೆ. ತಂದೆ ಬಂದರೇ—ಎಂದು ಬಾಗಿಲಿಗೆ ಬಂದ ಕಮಲೆ ತಾನು ಚಿತ್ರಿಸುತ್ತಿದ್ದ ಪತಿಯೇ ಬಂದು ನಿಂತುದನ್ನು ಕಂಡಳು. ಯಾರದೋ ಸೈಕಲ್ಲು ಏರಿ ಹೆಂಡತಿಯ ಮುಖ ನೋಡಿಹೋಗಲು ಬಂದಿದ್ದಾನೆ. ಬಂದವನು ನಿಂತಲ್ಲಿಯೇ ಮುಸಿ ಮುಸಿ ನಕ್ಕ. ಜಡವಾದ ಅವಳ ಕಣ್ಣುಗಳನ್ನು ನೋಡಿ 'ನಿದ್ರೆ ಕೆಟ್ಟಿತೇ ?' ಎಂದ. 'ನನಗೆಲ್ಲಿಯ ನಿದ್ರೆ'ಯೆಂದ ಕಮಲೆ ಹಾಗೇ ಕಣ್ಣೊರಸಿಕೊಂಡಳು. ಹತ್ತು ನಿಮಿಷ ಹಾಗೇ ಒಬ್ಬರನ್ನೊಬ್ಬರು ಸುಮ್ಮನೇ ನೋಡುತ್ತ ನಿಂತರು. ದಿನಕರ ಗಡಿಯಾರ ನೋಡಿ ಹೊರಟು ನಿಂತ. 'ಚಹಾ' ಎಂದಳು ಕಮಲೆ. 'ವೇಳೆಯಿಲ್ಲ' ಎಂದು ದಿನಕರ ಹೊರಡಲಾರದೆ ಹೊರಟುಬಿಟ್ಟ.

ಅವನು ಹೋದ ತರುವಾಯ ಕಮಲೆಗೆ ಪೂರಾ ಎಚ್ಚರವಾಯಿತು. ಅಕಲ್ಪಿತವಾಗಿ ಮಧ್ಯಾಹ್ನ ಬಂದ ಪತಿಗೆ ಉಪಹಾರ ಕೊಡದೆ ಕಳಿಸಿದೆ— ಎಂದು ಮರುಗಿದಳು. ಅವನು ಬಂದಕೂಡಲೇ ಮಾಡಿಕೊಡಬಹುದಿತ್ತು— ಎಂದುಕೊಂಡಳು. ಆದರೆ ಅವನು ಬಂದಾಗ ಇವಳಿಗೆ ಅಚ್ಚರಿ–ಆನಂದಗಳಲ್ಲಿ ಅದು ತೋಚಲೇ ಇಲ್ಲ. ಇಷ್ಟು ಬೇಗ ಅವನು ಹೊರಡುತ್ತಾನೆಂದೂ ತಿಳಿಯಲಿಲ್ಲ. ಅವನಾದರೂ ಹೇಳಬಹುದಿತ್ತು. ಆದರೆ ಅವನಿಗೂ ಕಮಲೆಯದೇ ಕೆಲಸವಿತ್ತು. ಹೇಗೂ ಬಂದಿದ್ದರು. ಒಂದು ದಿನ ತಡಮಾಡಿ ಹೋಗಿದ್ದರೇನಾಗುತ್ತಿತ್ತು ?—ಎಂದೂ ಅಂದುಕೊಂಡಳು. ಆದರೆ ಅವನ ಬಿಡುವಿನ ಅವಕಾಶವನ್ನವಳು ಹೇಗೆ ತಿಳಿಯಬಲ್ಲಳು ?

ನಡುವೆ ಹತ್ತು ನಿಮಿಷ ಬಂದುಹೋದ ದಿನಕರ ಅಂದು ಸಂಜೆ ಮನೆಗೆ ಬರುವಾಗ ಏಳು ಗಂಟೆ. ಐದು ಗಂಟೆಗೇ ಉಪಹಾರ ಸಿದ್ಧ ಮಾಡಿಕೊಂಡು ಕುಳಿತ ಕಮಲೆಗೆ ನಿಮಿಷಗಳು ಯುಗವಾದವು. ಅವನು ಬಂದಾಗ ಮಬ್ಬುಗತ್ತಲೆ. ದೀಪವನ್ನೂ ಅಂಟಿಸಲು ತೋಚದೆ ಕುಳಿತ ಕಮಲೆ ಪತಿ ಬಂದು ಸೆಳೆದುಕೊಂಡಾಗಲೇ ಈ ಲೋಕಕ್ಕೆ ಬಂದವಳು ಅಳುತ್ತಿದ್ದಳು. ದಿನಕರ 'ಯಾಕೆ–ಏನು ?' ಎಂದು ಕೇಳಿದರೂ ಅವಳಿಗೆ ಹೇಳಲು ಬರದು.

ಮಾಡಿಟ್ಟ ತಿಂಡಿ–ತೀರ್ಥ ಆರಿ ಕುಳಿತಿತ್ತು. ಅಂದು ರಾತ್ರಿ ಅಡಿಗೆಯಾಗಿ ಊಟವಾದಾಗ ರಾತ್ರಿ ಹತ್ತು ಗಂಟೆ. ಮರುದಿನ ದಿನಕರ ಆಫೀಸಿಗೆ ಹೋಗುವಾಗ ಕಮಲೆ ಅಂದೂ ಅವರು ಬರುತ್ತಾರೆಯೇ—ಎಂದು ಕೇಳಿ

ತಿಳಿಯಬೇಕೆಂದವಳು ಕೇಳಲಿಲ್ಲ. ಎರಡು ಗಂಟೆಗೆ ನೀರು ಕಾದಿಸಿ ಇಟ್ಟಿದ್ದಳು. ಆದರೆ ಅವನು ಬರಲೇ ಇಲ್ಲ. ಆರು ಗಂಟೆಗೆ ಬಂದಾಗ 'ಯಾಕೆ ಬರಲಿಲ್ಲ'–ಎಂದು ಕೇಳಿದಳು. 'ಹೇಗೆ ಬರಲಿ ?' ಎಂದರೆ 'ನಿನ್ನೆ ಬಂದಿದ್ದಿರಲ್ಲ'—ಎಂದಳು. 'ಯಾರದೋ ಸೈಕಲ್ ಸಿಕ್ಕಿತ್ತು. ಬಂದು ಹೋದೆ' ಎಂದ.

'ಇವರು ಒಂದು ಸೈಕಲ್ ಯಾಕೆ ಕೊಳ್ಳಬಾರದು'—ಎಂದು ಕಮಲೆ ಯೋಚಿಸಿದಳಾದರೂ ದಿನಕರನಿಗೆ ಹೇಳಲಿಲ್ಲ.

೫

ತನಗೆ ಇಂಥದು ಬೇಕು ಎಂದು ಕಮಲೆ ದಿನಕರನನ್ನು ಎಂದೂ ಕೇಳಿದವಳಲ್ಲ. ಆದರೆ ಅವಳಿಗೆ ಏನೇನು ಆಗಬೇಕೆಂದು ದಿನಕರನೇ ಚಿಂತಿಸುವ; ಅದನ್ನು ಒದಗಿಸಿ ತೃಪ್ತಿ ಹೊಂದುವ. ತಂದೆಯ ಮನೆಯಲ್ಲಿ ತಾನು ಬಯಸಿದ ಬಟ್ಟೆ–ಬರೆ, ವಸ್ತು–ಒಡವೆ ಮತ್ತೆ ಮತ್ತೆ ಕೇಳಿದಾಗ ಒಂದೊಂದಾಗಿ ಸಿಕ್ಕಬೇಕಾದರೆ ಸಾಕಾಗಿತ್ತು. ಹೆಂಡತಿ ತೀರಿದ ಮೇಲೆ ವೆಂಕಟರಾಯರು ಅನ್ಯಮನಸ್ಕರಾಗಿದ್ದು ಕಮಲೆಯ ಆವಶ್ಯಕತೆಗಳನ್ನು ತಿಳಿಯಲು ಸಮರ್ಥರಾಗಿದ್ದಿಲ್ಲ. ಅವಳಿಂದ ಬೇಡಿಕೆ ಬಂದಾಗಲೂ ಕೂಡಲೆ ಒದಗಿಸಲು ಸ್ವಭಾವವಾಗಿ ಅವರಿಂದಾಗದು. ಅದೇ ತಾಯಿಯಿದ್ದಾಗ ತನಗೆ ತಿಳಿಯದಂತೆಯೇ ಅದು–ಇದು ಎಂದು ಅಲಂಕಾರಗಳನ್ನು ಪಡೆಯುತ್ತಿದ್ದಳು. ಮುಂದೆ ತನ್ನ ಬಟ್ಟೆ ಹರಿದುದನ್ನೂ ತಂದೆಗೆ ಸೂಚಿಸಲಾರದಾದಳು.

ಈಗ ಅವಳ ಆಸೆ ಜಾಗ್ರತವಾಗುವ ಮುನ್ನವೇ ತಾನು ಕಂಡರಿಯದ ಜಾರ್ಜೆಟು–ಸಾಟೀನು ಬಟ್ಟೆಗಳು, ಕಾಡಿಗೆ— ತಿಲಕಗಳು, ಸ್ನೋ–ಪವುಡರುಗಳು ಬಂದು ಸೇರುತ್ತಿವೆ. ದೇವರಿಗೆಂದು ತಂದ ಹೂಗಳೇ ಸಾಕಾಗಿದ್ದ ಕಮಲೆಗೆ ಈಗ ದಿನಾ ಪುಷ್ಪಾರಾಧನೆ. ಬಳೆಗಳು, ಬಾಚಣಿಗೆ, ಕ್ಲಿಪ್ಪು–ಹೇರ್ ಪಿನ್ನುಗಳು ಒಂದೊಂದೇ ಬಂದು ಅವಳ ಸಿಂಗಾರಕ್ಕೆ ಕಲೆತು ಕಾಡುತ್ತಿವೆ. ಅವನ್ನೆಲ್ಲ ನೆರೆಯವರು, ಬೀದಿಯಲ್ಲಿ ತಿರುಗಾಡುವ ಹುಡುಗೆಯರು ತೊಡಗಿಸಿಕೊಂಡು ಸುಳಿಯುತ್ತಿದ್ದುದನ್ನು ಅವಳು ನೋಡಿದ್ದಾಳೆ. ಒಮ್ಮೊಮ್ಮೆ ಅದೆಲ್ಲ

ತನಗೂ ಇದ್ದರಾಗುತ್ತಿತ್ತು—ಎಂದು ಅನಿಸಿದಾಗ ತಾಯಿಗೆ ಬೇಕೆನಿಸದ ಅವೆಲ್ಲ ತನಗೆ ದೊರೆಯುವಂತಿದ್ದಿಲ್ಲ. ಬಾಯಿ ಬಂದು ಕೇಳಬೇಕೆಂದಾಗ ತಾಯಿ ಇದ್ದಿಲ್ಲ.

ದಿನಕರನಿಗೆ ಕಮಲೆಯನ್ನು ಇವೆಲ್ಲ ಪ್ರಸಾಧನಗಳಿಂದ ಪೂಜಿಸಿ ನೋಡಿ ದಷ್ಟೂ ತೃಪ್ತಿಯಿಲ್ಲ. ಇದ್ದ ಅವುಗಳನ್ನು ಅವಳು ಬಳಸದಿದ್ದರೆ ಬೇಸರ. ಇದನ್ನರಿತ ಕಮಲೆ ಒಂದೊಂದಾಗಿ ಎಲ್ಲವನ್ನೂ ಉಪಯೋಗಿಸುತ್ತಿದ್ದಾಳೆ. ತನ್ನನ್ನು ತಾನೇ ತಿಳಿಯದ ರಂಗಿನಿಂದ ಮೆರೆಸುತ್ತಾಳೆ. ದಿನಕರನಿಗೆ ಪ್ರೀತಿ ಯಾದರೆ, ಅವುಗಳಿಂದಾಗಿ ತನ್ನಲ್ಲಿ ಪಾತ್ರತೆ ಉಂಟಾಗುವದಾದರೆ ಯಾಕೆ ಬೇಡ—ಎನ್ನುತ್ತಾಳೆ. ಅವಳ ಭಾರವಾದ ಸಮಯವೂ ಇದರಿಂದಾಗಿ ಸ್ವಲ್ಪ ಹಗುರಾಗುತ್ತಿದೆ. 'ಅವರಿಗೆ ಮೆಚ್ಚಿಗೆ ಯಾಗಬೇಕೆ'ಂಬ ಆಸೆಯೂ ಅಂಕುರಿ ಸಿದೆ.

ಕಮಲೆಗೆ ದಿನಕರನ ಒಪ್ಪ–ಓರಣದ ಬಗ್ಗೆ ಅಂಥ ಎಚ್ಚರವಿನ್ನೂ ಬಂದಿಲ್ಲ. ಅವನು ಅವಳ ಆರಾಧ್ಯ ದೇವತೆ. ಅವನು ಹೇಗಿದ್ದರೂ ಅವಳಿಗೆ ಮೆಚ್ಚಿಕೆ. ಆಫೀಸಿಗೆ ಹೋಗುವಾಗ ಸೂಟುಧರಿಸಿದಾಗ ಒಂದು ಸಂತೋಷ. ಮನೆಗೆ ಬಂದಾಗ ಉಡುವ ಚುಂಗು ಧೋತರವೂ ಅವನಿಗೆ ಒಪ್ಪುತ್ತದೆ. ರಾತ್ರಿ ಅವನು ಪಟ್ಟಿ ಪಟ್ಟಿಯ ಪಾಯಜಾಮು, ನಿಲುವಂಗಿ ಹಾಕುತ್ತಾನೆ. ಅದೂ ಚಂದವೇ. ದಿನವೂ ಕ್ಷೌರದ ಸಾಬೂನು ಬಳಿದುಕೊಂಡು ಕಮಲೆಯನ್ನು 'ಆ' ಎಂದು ಹೆದರಿಸುತ್ತಾನೆ. ಆಗಲೂ ಅವಳು ಎದೆದುಂಬಿ ನಗುತ್ತಾಳೆ.

ಆದರೆ ಅವನಿಗೆ ಇನ್ನೇನುಬೇಕು—ಎಂದು ಅವಳಿಗೆ ತಿಳಿಯದು. ಮನೆ ಯಲ್ಲಿ ತಂದೆಯ ತೀರ ಸಾದಾವೇಷ ನೋಡಿದ ಅವಳಿಗೆ, ತಾನು ಚಿಕ್ಕವಳಾಗಿ ದ್ದಾಗಲೇ ತೀರಿದ ಅಣ್ಣನ ಯಾವೊಂದು ಅಲಂಕಾರವನ್ನೂ ಕಾಣದವಳಿಗೆ ಇಷ್ಟೆಲ್ಲ ವೇಷ-ಭೂಷೆಯಿದ್ದ ಪತಿಗೆ ಇನ್ನೇನು ಬೇಕೆಂದೇ ತಿಳಿಯದು. ಅದೇ ದಿನಕರನ ಸಮಸ್ಯೆ. ಅವಳಿಗೆ ತೃಪ್ತಿಯಾಗಬೇಕೆಂದು ಮೊದಮೊದಲು ಬಹಳ ಜಾಗರೂಕತೆಯಿಂದ ತನ್ನನ್ನು ಸಿಂಗರಿಸಿಕೊಳ್ಳುತ್ತಿದ್ದ. ಈಗೀಗ ಅವಳ ಆಸೆ ತಿಳಿಯದೇ ಒಂದೊಂದೇ ಅಸಡ್ಡೆ ಮಾಡತೊಡಗಿದ್ದಾನೆ. ಆದರೆ ಕಮಲೆಯ ಮೆಚ್ಚಿಗೆಯಲ್ಲವನಿಗೆ ಏರು–ಪೇರು ಕಾಣುತ್ತಲಿಲ್ಲ. ತಾನು ಹೇಗಿದ್ದರೂ ಅವ ಳಿಗೆ ಮೆಚ್ಚಿಗೆಯೆಂದು ಅವನಿಗೆ ತಿಳಿಯದು. ಅವಳು ತನ್ನನ್ನು 'ಹೀಗೆ–ಹೀಗೆ

ಮಾಡು' ಎಂದು ತನ್ನ ರುಚಿಯನ್ನು ತೋರಲಿ ಎಂದವನ ಆಸೆ. ಆದರೆ ಅದಕ್ಕೆ ಯಾವ ಸೂಚನೆಯೂ ಕಂಡುಬರುತ್ತಲಿಲ್ಲ.

ಪೇಟೆಗೆ ಅವಳನ್ನು ಕರೆದೊಯ್ದು ಅವಳಿಗೆ ಬೇಕಾಗುವದೆಂದು ತಾನೇ ತಿಳಿದ ಸೌಭಾಗ್ಯ ವಸ್ತುಮಂದಿರವನ್ನೇ ಕೊಂಡುತಂದು ಮನೆ ತುಂಬಿದ್ದಾನೆ. ಆದರೆ ಆ ಮಂದಿರವಿದ್ದುದರಿಂದ ಅದೆಲ್ಲಾ ಅವಳಿಗೆ ಬೇಕೆಂದು ತನಗೆ ತಿಳಿಯಿತೆಂದು ಅವನು ಯೋಚಿಸಲಾರ. ಗಂಡಸರಿಗೆ ಹಾಗೆ ಬೇಕಾಗುವ ಒಡವೆಗಳ ಸಂಗ್ರಹ ಒಂದೆಡೆ ಇದ್ದುದನ್ನು ತಾನೂ ಅರಿಯನು. ಗಂಡು ತನ್ನ ರುಚಿಯನ್ನು ತಾನೇ ರೂಪಿಸಿಕೊಳ್ಳಬೇಕೆಂಬುದನ್ನು ಸ್ವಭಾವವಾಗಿ ಅರಿಯದಿದ್ದ ಅವನಿಗೆ ಕಮಲೆಯಿಂದ ಸೂಚನೆಗಳಿಲ್ಲವೆಂಬುದೇ ಕೊರಗು.

ನಾನೊಂದು 'ಊಲನ್ ಸೂಟ್ ಹೊಲಿಸಿಕೊಳ್ಳಲೇ' ಎಂದೊಮ್ಮೆ ಕಮಲೆಗೆ ಕೇಳಿದ. 'ಆಗಲಿ' ಎಂದಳವಳು. ಆ ಸಮ್ಮತಿಯ ವಿಶ್ಲೇಷಣೆ ಮಾಡುವ ಬುದ್ಧಿಯಿಂದ "ನೂರಾಐವತ್ತು ರೂಪಾಯಿ ಬೇಕಾಗುತ್ತದೆ—ಅದಕ್ಕೆ" ಎಂದ.

ಇವನ ಹಣದ ಲೆಕ್ಕ ಅವಳಿಗೆ ತಿಳಿಯದು. ನೂರಾಐವತ್ತು ದೊಡ್ಡ ಮೊತ್ತವೆಂಬುದನ್ನು ಮಾತ್ರ ಬಲ್ಲಳು. 'ಸೈಕಲ್ ಕೊಂಡರಾಗುತ್ತಿತ್ತು' ಎಂದವಳಿಗೆ ಅನಿಸಿದಾಗ ಇದೇ ಕಾರಣದಿಂದ ತನ್ನ ಬಯಕೆಯನ್ನು ಪ್ರದರ್ಶಿಸಲಾಗಲಿಲ್ಲ.

"ಬೇಕಾದರೆ ತಕ್ಕೊಂಡರಾಯಿತು" ಎಂದಳು.

'ಯಾರಿಗೆ ಬೇಕಾದರೆ' ಈ 'ಆಯಿತು' ಎಂಬುದಕ್ಕೆ ದಿನಕರ ಅರ್ಥ ಕಲ್ಪಿಸಲೆಳಸಿದ.

"ನೋಡು; ಒಮ್ಮೆಲೆ ಇಷ್ಟು ಹಣವನ್ನೆಲ್ಲಿಂದ ತರಲಿ ?" ಎಂದ. ಈ ಪ್ರಶ್ನೆಗೆ ಕಮಲೆಯಿಂದ ನೇರವಾದ ಉತ್ತರ ಹೇಗೆ ಬರಬೇಕು ? ತನಗೆ ಏನೆಲ್ಲಾ ವಸ್ತು-ಒಡವೆಗಳಿವೆ; ಪತಿ ಹಣ ಸೂರೆಮಾಡಿದ್ದಾನೆ. ಈಗ ಇದಕ್ಕೆ ಹಣವಿದೆಯೋ ಇಲ್ಲವೇ—ಎಂದವಳಿಗೆ ತಿಳಿಯದು. ತನಗೆ ಕೊಂಡ ಸಾಮಾನುಗಳು ತನಗಾದರೂ ಅದು ಅವನ ಆಸೆಯೂ ಅಹುದು—ಎಂದವಳಿಗೆ ಅನಿಸದಿರಲಿಲ್ಲ. ಪತಿಗೆ ಬೇಕಾದ ಒಂದು ಊಲನ್‌ಸೂಟ್‌ಗೆ ಒಂದೂವರೆನೂರು

ರೂಪಾಯಿಯನ್ನು ತಂದೆಯಿಂದ ಪಡೆಯಬಹುದೇ—ಎಂದೂ ಒಮ್ಮೆ ಯೋಚಿಸಿದಳು. ಆದರೆ ಹಾಗೆ ತಂದೆಯನ್ನು ಕಾಡಿ-ಬೇಡಿ ಅವಳಿಗೆ ಅಭ್ಯಾಸವಿಲ್ಲ. ಅಲ್ಲದೆ ತನ್ನ ಚಿಲ್ಲರೆ ಬೇಡಿಕೆಗಳನ್ನೂ ತಂದೆಯ ಮುಂದೆ ಮಂಡಿಸಲಾರದ ಅವಳಿಗೆ ಇಷ್ಟು ಹಣ ತಂದೆ ಒದಗಿಸಬಹುದೇ—ಎಂದೂ ತಿಳಿಯದು. ಅವಳಿಗೆ ಹೊಳೆದದ್ದೆಂದರೆ ಒಂದೇ ಉಪಾಯ:

"ನಿಮಗೆ ಸೂಟ್ ಆಗುವವರೆಗೆ ನನಗೆ ಮಾತ್ರ ಏನೂ ಕೊಳ್ಳಬಾರದು" ಎಂದಳು.

ದಿನಕರ ಈ ಮಾತಿಗೆ ಇಲ್ಲದ ಅರ್ಥ ಹಚ್ಚಲು ಬಯಸಲಿಲ್ಲ. ಆದರೆ ಅವಳ ಮಾತನ್ನು ಅರ್ಧ ಮನಸ್ಸಿನಿಂದ ಮೆಚ್ಚಿದ. ಅವಳಿಗಾಗಿ ಕೊಂಡ ವಸ್ತುಗಳಿಗೆ ಅವನು ಮುಕ್ತಮನಸ್ಸಿನಿಂದಲೇ ವೆಚ್ಚಮಾಡಿದ್ದಾನೆ. ಈಗ ಹಣದ ಮಾತನ್ನು ಅವಳಿಗೆ ಹೇಳಿ, ಅವಳಿಂದ ಬಂದ ಉತ್ತರದಿಂದ ಅವನು ತೃಪ್ತನಾಗ ಬೇಕಿತ್ತು. ಆದರೆ ಈ ಹೆಣ್ಣು ಪರಾಧೀನೆಯೆಂಬುದು ಅವನಿಗೆ ಹೊಳೆಯದು. ತನಗೆ ಆರ್ಥಿಕ ಸಲಹೆಯನ್ನು ಅವಳು ಹೇಗೆ ಕೊಟ್ಟಾಳು ಎಂದವನು ನೆನಸಲಿಲ್ಲ. ತನ್ನ ಸಂಬಳವಿಷ್ಟು—ತನ್ನ ಕೈಯಲ್ಲಿಯ ಹಣವಿಷ್ಟು—ತನ್ನ ಖರ್ಚು-ವೆಚ್ಚಗಳಿಷ್ಟು—ಮುಂದೆ ಹೇಗೆ ಮಾಡೋಣ ಎಂದು ಕೇಳಿದ್ದರೂ ಅವಳು ಉತ್ತರಿಸಲಾರಳೆಂದೂ ಅವನಿಗೆ ತಿಳಿಯದು. ಉಳಿದ ಹೆಣ್ಣುಗಳಾದರೆ ಗಂಡನ ಬಯಕೆಯನ್ನು ತಂದೆಯಿಂದ ತುಂಬುತ್ತಾರೆಂಬುದನ್ನು ಅವನು ಬಲ್ಲ. ಆದರೆ ತಾನಾಗಿ ವೆಂಕಟರಾಯರಿಂದ ಏನನ್ನೂ ಬಯಸಿಲ್ಲ. ಕಮಲೆ ಪಡೆದು ತರಬೇಕೆಂಬ ಆಸೆಯೂ ಅವನದಲ್ಲ. ತನ್ನ ಗಳಿಕೆಯಲ್ಲಿಯೇ ವೆಚ್ಚಮಾಡುವ ಅಧಿಕಾರ ಕಮಲೆಯೂ ವಹಿಸಬೇಕೆಂದವನ ಆಸೆ. ಆದರವಳು ಅದನ್ನು ಸ್ವಾಗತಿಸುವ ಸೂಚನೆ ಅವನಿಗೆ ಕಾಣದಂತಾಗಿದೆ.

ತನ್ನನ್ನೇ ಕೊಟ್ಟುಕೊಂಡ ಅವಳಿಗೆ ತಾನೂ ಕೊಟ್ಟುಕೊಂಡಿರುವದು ತಿಳಿಯದಲ್ಲ—ಎಂದವನ ಕೊರಗು. ಆದರೆ ಗಂಡು ಹೆಣ್ಣಿನಂತೆ ಎಲ್ಲಾ ಕೊಟ್ಟುಕೊಳ್ಳುವದು ಸಾಧ್ಯವೇ ಎಂದು ಅವನು ಯೋಚಿಸಲಾರ. ಹೆಣ್ಣಾದರೆ ತನ್ನ ತಾಳಿಮಣಿಯನ್ನೂ ಗಂಡಿನ ಚಪಲಕ್ಕೆ ಕೊಟ್ಟುಕೊಂಡದ್ದುಂಟು. ಆದರೆ ಗಂಡಿಗೆ ತ್ಯಾಗವೆಂಬುದು ತನ್ನ ಆಸೆಯ, ತನ್ನ ಆಕಾಂಕ್ಷೆಯ, ತನ್ನ ರುಚಿಯ ಕೆಲಸಗಳಿಗೆಂಬುವನ್ನು ಅರಿಯದೆ ತಂತಾನೆ ಕೊಂಡಾಡುವ ಸ್ವಭಾವ. ದಿನಕರನೂ ಇದಕ್ಕೆ ಹೊರತಾಗಿಲ್ಲ.

“ ನನಗೆ ಈಗ ಸೂಟೇ ಬೇಡ ಬಿಡು ” ಎಂದ—ಅವಳನ್ನು ರಮಿಸುವಂತೆ.

ತಿಂಗಳು ತಿಂಗಳೂ ಒಂದಿಷ್ಟು ಹಣ ಉಳಿಸಿದರೆ ಆಗುತ್ತದೆಂದು ಮಾತ್ರ ಕಮಲೆ ಸೂಚಿಸಬಯಸಿದಳು. ಆದರೆ ಅವಳ ಬಾಯಿಯಿಂದ ಆ ಮಾತು ಬರಲಿಲ್ಲ. ಅವಳಿಗೂ ಪತಿಯ ಮಾತಿನಿಂದ ಸಮಾಧಾನವಾಗಲಿಲ್ಲ. ಅದನ್ನೂ ಅವಳು ತೋರ್ಪಡಿಸಲಿಲ್ಲ. ಕಂಡಿದ್ದರೆ ದಿನಕರ ಅದಕ್ಕೇನು ಅರ್ಥ ಹಚ್ಚು ತ್ತಿದ್ದನೋ !

೬

ದಿನಕರನಿದ್ದ ಮಾಳಗುಡ್ಡದ ಮನೆ ಒಂದು ಬಂಗಲೆಯ ಉಪಗೃಹ. ಬಂಗಲೆಯಲ್ಲಿ ಅದರ ಒಡೆಯ ಸೀತಾರಾಮರಾಯರು ಇದ್ದಾರೆ. ಅವರು ಒಂದು ಇನ್ಶೂರೆನ್ಸ ಕಂಪನಿಯ ಶಾಖಾಪತಿ. ಅವರಿಗೆ ಸಂಚಾರವೇ ಹೆಚ್ಚು. ದಿನಕರನಿಗೂ ಅವರಿಗೂ ಭೆಟ್ಟಿಯಾಗುವದೇ ಅಪರೂಪ. ಕಂಡಾಗ ಮುಗುಳು ನಗೆಯಿಂದ ಇವನನ್ನು ಸ್ವಾಗತಿಸುತ್ತಾರೆ. ಅಂಗಳದಲ್ಲಿಯೇ ನಿಂತು ಸದ್ಯದ ಪರಿಸ್ಥಿತಿಯ ಬಗ್ಗೆ ಬೇಕಾದಷ್ಟು ಮಾತನಾಡುತ್ತಾರೆ. ಬಾಗಿಲಿಗೆ ಬಂದು ಬಂದು ಕಮಲೆ ಇವರ ಮಾತು ಮುಗಿಯಿತೇ ಎಂದು ನೋಡುತ್ತಾಳೆ. ಒಳಗೆ ಚಹಾ ಇಳಿಸಿಟ್ಟವಳಿಗೆ ಗಂಡನನ್ನು ಹೇಗೆ ಕರೆಯುವದೆಂದೇ ತಿಳಿಯದು. ಸೀತಾರಾಮರಾಯರು ಮಾತಿನಲ್ಲಿ ಮುಳುಗಿದಂತೆ ಕಂಡರೂ ಸುತ್ತಲೂ ಲಕ್ಷ್ಯ ವಿಡುವ ಸ್ವಭಾವದವರು. ಕಮಲೆಯ ಚಟುವಟಿಕೆಯನ್ನು ಕಂಡು ಅವರೇ ದಿನಕರನನ್ನು ಎಚ್ಚರಿಸುತ್ತಾರೆ. ದಿನಕರ ಅವರನ್ನು ಚಹಾಕ್ಕೆ ಆಮಂತ್ರಿಸು ತ್ತಾನೆ. ‘ ನಾನು ನಿಮ್ಮನ್ನು ಕರೆಯಬೇಕು ದಿನಕರರಾವ್ ’ ಎನ್ನುತ್ತ ತಾವೇ ಮುಂದಾಗಿ ನಡೆದು ದಿನಕರನ ಮನೆ ಸೇರುತ್ತಾರೆ.

ದಿನಕರ ಅದೇ ಬಂದಾಗ ಸೀತಾರಾಮರಾಯರ ಕುಟುಂಬ, ಮನೆಯಲ್ಲಿ ದ್ದವರು ಸ್ವಲ್ಪ ಕಾಲದಲ್ಲಿಯೇ ಹೆರಿಗೆಗೆಂದು ತವರಿಗೆ ಹೋಗಿ ಮೊನ್ನೆ ತಿರುಗಿ ಬಂದಿದ್ದಾರೆ. ಅವರ ಮನೆಗೂ ಅವರ ಪತ್ನಿ ಕುಸುಮೆಯೇ ಯಜಮಾನಿ. ಕಮಲೆಗಿಂತ ಸ್ವಲ್ಪ ಹಿರಿಯಳು. ಅವಳಿಗೆ ಆಗಿನದು ಎರಡನೆಯ ಮಗು.

ಕುಸುಮೆ ಬಂದಾಗಿನಿಂದ ಕಮಲೆಯನ್ನು ನೋಡುತ್ತಿದ್ದಾಳೆ. ಅವಳು ತನ್ನ ಬಾಗಿಲಿನಿಂದ ಹೊರಗೇ ಬರುವದಿಲ್ಲ. ತಾನೋ—ತನ್ನ ಇಬ್ಬರು ಮಕ್ಕಳ ಆರೈಕೆಯಲ್ಲಿ, ಮನೆಯ ಕೆಲಸಗಳಲ್ಲಿ ತೊಡಗಿದವಳು. ಕಮಲೆಗೇನು ಅಂಥ ಎಡೆಬಿಡದ ಕೆಲಸ ಎಂದವಳ ಯೋಚನೆ. ತನಗೆ ಮಕ್ಕಳಾಗುವ ಮುನ್ನ ಪತಿಯೊಡನೆ ಇದ್ದ ದಿನಗಳನ್ನು ನೆನಸುತ್ತಾಳೆ. ತಾನೂ ಹಾಗೇ ಇದ್ದುದನ್ನೇ ಕಾಣುತ್ತಾಳೆ.

ಒಂದು ದಿನ ಕುಸುಮೆಯ ಚೊಚ್ಚಿಲುಮಗ ವಸಂತ ಆಡುತ್ತ ಕಮಲೆಯ ಮನೆ ಹೊಕ್ಕ. ಕಮಲೆ ಕರೆದು ಅವನನ್ನೆತ್ತಿಕೊಂಡಳು. ಒಳಕ್ಕೆ ಕರೆದೊಯ್ದು ಎರಡು ಬಿಸ್ಕೀಟು ಕೊಟ್ಟಳು.

ಕುಸುಮೆ ತನ್ನ ಮಗ ಎಲ್ಲಿ ಹೋದನೆಂದು ಹುಡುಕತೊಡಗಿದಳು. ಅಳುವ ಹಸುಗೂಸನ್ನು ಎತ್ತಿಕೊಂಡೇ ಕಮಲೆಯ ಮನೆಗೆ ಬಂದಳು. ಕಮಲೆಯ ಕಂಕುಳಲ್ಲಿದ್ದ ವಸಂತ ಬಿಸ್ಕೀಟು ತಿನ್ನುತ್ತ ಅವಳ ಮುಖ ನೋಡುತ್ತಿದ್ದಾನೆ. ಅವಳೂ ಅವನನ್ನೇ ನೋಡುತ್ತ ಹಸನ್ಮುಖಿಯಾಗಿದ್ದಾಳೆ.

“ ಎಲಾ ತುಂಟಾ, ಮಾವಿೂ ಮನೆಗೆ ಬಂದೆಯಾ ? ”

ಕುಸುಮೆಯ ಮಾತು ಕೇಳಿ, ಕಮಲೆ ಎಚ್ಚೆತ್ತು ಅವಳನ್ನು ನಸುನಾಚಿಕೆಯಿಂದ ನೋಡಿ ‘ ಬನ್ನಿ ’ ಎಂದು ಸ್ವಾಗತಿಸಿದಳು.

ಕುಸುಮೆ ಒಳಕ್ಕೆ ಬಂದು ಕುಳಿತುಕೊಂಡು ಹಸುಳೆಗೆ ಹಾಲೂಡಿಸುತ್ತ “ ನಾನು ಮನೆಯೆಲ್ಲಾ ಹುಡುಕಿದೆ ನೋಡಿರಿ ” ಎಂದಳು.

ಕಮಲೆ ನಸುನಕ್ಕು, “ ಕೆಲಸವಾಯಿತೇ ? ” ಎಂದಳು.

“ ಈ ಮಕ್ಕಳಲ್ಲಿ ಕೆಲಸ ತೀರುವದಿದೆಯೇ ? ”

“ ಹೌದು; ಆದರೆ ಕೆಲಸದಾಕೆ ಇದ್ದಾಳಲ್ಲ ! ”

“ ಇದ್ದಾಳೆ. ಅವಳು ಮನೆಯ ಕೆಲಸ ಮಾಡಿದರೆ ಸಾಕು. ಮಕ್ಕಳ ಕೆಲಸ ನನ್ನದೇ ಅಲ್ಲವೇ ? ”

“ ಹೌದು; ಈಗ ಮನೆ ತುಂಬಿದಂತಾಗಿದೆ. ಅದೇ ನಾನು ಬಂದಾಗ ನೀವಿದ್ದಿಲ್ಲ. ಯಾವಾಗಲೂ ಬಾಗಿಲಿಗೆ ಬೀಗವಿರುತ್ತಿತ್ತು. ”

“ ಅವರು ಊರಲ್ಲಿ ಇರುವ ಕೆಲಸದವರಲ್ಲ. ”

“ ನೀವು ಬಂದಿರಲ್ಲ; ನನಗೆ ಜೀವ ಬಂದಂತಾಯಿತು. ”

" ಇವರು ಅಲ್ಲಿ ಬಂದಾಗ ನೀವು ಬಂದುದನ್ನು ಹೇಳಿದ್ದರು. ನನಗೂ ಅಂದಿನಿಂದ ನಿಮ್ಮನ್ನು ನೋಡಬೇಕೆನಿಸಿತ್ತು. "

" ನೀವು ಬಾಣಂತನ ಮುಗಿಸಿ ಎಂದು ಬಂದೀರೋ—ಎಂದು ನಾನೂ ಕಾದಿದ್ದೆ. "

" ಬಾಣಂತನ ಮುಗಿದು ಎರಡು ತಿಂಗಳಾಯಿತು. ಈಗ ಇವಳಿಗೆ ಐದರಲ್ಲಿ " ಎಂದು ಚಿತ್ರಾಳನ್ನು ಎಬ್ಬಿಸಿದಳು.

ವಸಂತ ಮತ್ತೆ ಅಂಗಳಕ್ಕಿಳಿದಿದ್ದ. ಕಮಲೆ ಚಿತ್ರೆಯನ್ನು ಕರೆದು ಕೊಂಡು ಮುದ್ದಾಡಿದಳು.

" ಕೂಸು ಚಿಕ್ಕದು. ನನ್ನ ತಂಗಿಯನ್ನು ಕರೆದುಕೊಂಡು ಹೋಗೆಂದು ಅವ್ವ ಹೇಳಿದಳು. ಆದರೆ ಆವಳಿಗೆ ಹಿಂದೀ ಪರೀಕ್ಷೆಯಂತೆ; ಬರಲಿಲ್ಲ. ಅವಳ ಪರೀಕ್ಷೆಯಾಗುವಾಗ ಇಲ್ಲಿ ಇವರದೂ ಪರೀಕ್ಷೆಯಾದೀತೆಂದು ನಾನು ಬಂದುಬಿಟ್ಟೆ. "

" ಒಳ್ಳೆಯದಾಯಿತು. ದಿನಾ ಖಾನಾವಳಿಯ ಡಬ್ಬಿ ಬರುತ್ತಿತ್ತು. "

"ಹೂಂ. ಇವರು ಊರಲ್ಲಿದ್ದರೆ ಬೆಳಗಿನ ಊಟ ಸಂಜೆಗೆ ಮಾಡುತ್ತಾರೆ. ನಿಮ್ಮ ಯಜಮಾನರು ಈಗ ಯಾವ ಕಚೇರಿಯಲ್ಲಿದ್ದಾರೆ ? "

" ನಪ್ಲ್ಯಾಯ ಆಫೀಸಂತೆ. "

" ಈಗ ಮನೆಗೆ ತಪ್ಪದೆ ಬರುತ್ತಾರೆಯೆ ? "

" ಯಾಕೆ ? " ಎಂದು ಕಮಲೆ ನಕ್ಕಳು.

ಕುಸುಮೆಯೂ ನಗುತ್ತ, " ನೀವಿನ್ನೂ ಬಂದಿದ್ದಿಲ್ಲ. ಆಗ ನಾನಿನ್ನೂ ಹಡೆಯುವದಕ್ಕೆ ಹೋಗಿದ್ದಿಲ್ಲ. ನಿಮ್ಮ ಮದುವೆಯೇ ಆಗಿನ್ನೂ ಆಗಿದ್ದಿಲ್ಲ ವೆಂದು ಕಾಣುತ್ತದೆ. ನಿಮ್ಮ ತಂದೆಯೇ ಇರಬೇಕು—ಒಂದು ಸಂಜೆ ಹತ್ತು ನಲ ಬಂದುಬಂದು, ನಿಂತುನಿಂತು ಹೋಗಿದ್ದರು. ನಿಮ್ಮವರು ಯಾವಾಗ ಬರುತ್ತಿದ್ದರೋ, ಯಾವಾಗ ಹೋಗುತ್ತಿದ್ದರೋ ನಾನೂ ನೋಡಿದ್ದಿಲ್ಲ. ಈಗ ನೀವು ಬಂದಮೇಲಾದರೂ ಹೊತ್ತಿಗೆ ಮನೆ ನೆನಪಾಗುತ್ತಿರಬೇಕು" ಎಂದಳು.

ಕಮಲೆ ಕುಳಿತಲ್ಲೇ ಚಹಾ ಮಾಡಿದ್ದಳು. ಇಬ್ಬರೂ ನಗುತ್ತ ಕುಡಿದರು.

ಸೀತಾರಾಮರಾಯರು ಟಾಂಗಾದಲ್ಲಿ ಮನೆಗೆ ಬಂದವರು ಕುಸುಮೆ ಯನ್ನು ಕಾಣದೆ ತಲೆ ತುರಿಸುತ್ತ ಬಾಗಿಲಲ್ಲಿ ನಿಂತಿದ್ದಾರೆ. ಗಿಡದ ಮರೆಗೆ ನಿಂತ ವಸಂತನನ್ನು ನೋಡಿದರು. ಹೋಗಿ ಎತ್ತಿಕೊಂಡು, " ಎಲ್ಲಿದ್ದಾಳೆ ? " ಎಂದರು—ವಸಂತ ಮಾಮಿ ಮನೆ ತೋರಿಸಿದ.

ಅಂಗಳದ ಮಾತು ಕೇಳಿ ಕುಸುಮೆ ಎದ್ದು ಬಂದವಳು, " ಬಂದು ಬಹಳ ಹೊತ್ತಾಯಿತೇ ? " ಎಂದಳು.

" ತಾವು ಹೋಗಿ ಎಷ್ಟು ಹೊತ್ತಾಯಿತು ? "

" ಈಗ ಹೋಗಿದ್ದೆ " ಕುಸುಮೆ ಮನೆ ಸೇರುತ್ತ, " ಕಮಲಕ್ಕ ಚಹಾ ಮಾಡಿದ್ದರು, ತಡವಾಯಿತು. "

" ನೀನೊಬ್ಬಾಕೆ ಅವರ ಮನೆಯ ಚಹಾಕ್ಕೆ ಕಡಿಮೆಯಾಗಿದ್ದಿ. "

" ಏನು ತಪ್ಪಾಯಿತು ? ನಿಮ್ಮ ಮಗ ಮಾಮಿ ಮನೆ ಸೇರಿ ಬಿಸ್ಕೀಟು ಕತ್ತರಿಸುತ್ತಿದ್ದ. ನಾನು ಹುಡುಕಲೆಂದು ಹೋದೆ.... "

" ನಾನು ಚಹಾ ಹುಡುಕಿಕೊಂಡೇ ಅನೇಕ ಸಲ ಅವರ ಮನೆಗೆ ಹೋಗಿದ್ದೇನೆ. "

ಕಮಲೆ ಕಿಟಕಿಯಲ್ಲೇ ನಿಂತು ನೋಡುತ್ತಿದ್ದಳು.

## ೭

ತನ್ನ ಹಿಂದೀ ಪರೀಕ್ಷೆಯನ್ನು ಮುಗಿಸಿಕೊಂಡು ಕುಸುಮೆಯ ತಂಗಿ ಪ್ರಭಾ ಅಕ್ಕನ ಮನೆಗೆ ಬಂದಳು. ವಸಂತ ಪ್ರಭೆಯನ್ನು ಮರೆತಿಲ್ಲ. ಅವ ಳನ್ನು ತನ್ನ ಮಾಮಿ ಮನೆಗೆ ಕರೆದು ತಂದು ಪರಿಚಯ ಮಾಡಿಸಿದವನು ಅವನೇ.

ಪ್ರಭಾ ಕಮಲೆಯ ಓರಗೆಯವಳೇ. ಅವಳಿಗೆ ಸಿನೆಮಾ ಹಾಡುಗಳ ಹುಚ್ಚು. ಸದಾ ಬಾಯಲ್ಲಿ ' ಲಲಲಲ ಲಲಾಲಲಾ ' ಎಂದು ಸ್ವರ ಹಿಡಿದು ಬಿಡುವ ಆಟದಲ್ಲಿರುತ್ತಾಳೆ. ಕಮಲೆಗೆ ಇಂಥ ಹಾಡುಗಳ ಅಭ್ಯಾಸವಿಲ್ಲ. ಸಿನೆಮಾದ್ದೂ ವಿಶೇಷ ಪರಿಚಯವಿಲ್ಲ. "ಕಮಲಕ್ಕ ' ಮಹಲ್ ' ನೋಡಿ ದ್ದೀರಾ ? ಗೀತಾಬಾಲಿ ಹೇಗೆ ? ನಾಸೀಮಳಿಗೆ ವಯಸ್ಸಾಯಿತು. ಪೃಥ್ವಿ

'ದಹೇಜ'ದಲ್ಲಿ ಬಹಳ ಚನ್ನಾಗಿ ಮಾಡಿದ್ದಾನೆ. ದೇವಆನಂದ ನನಗೆ ಸಾಕಾ ಯಿತು. ಮೋತೀಲಾಲ್ ಮುದುಕ. ಇನ್ನೂ ಹುಡುಗಿಯರ ಕೂಡ ಸರಸ ವಾಡುತ್ತಾನೆ" ಎನ್ನುತ್ತಾಳೆ.

ಕಮಲೆಗೆ ಒಂದೂ ತಿಳಿಯದು. ತಾಯಿಯಿದ್ದಾಗ 'ಬಾಲಾಜಿ', 'ರಾಮರಾಜ್ಯ' ನೋಡಿದ್ದಳು. ಧಾರವಾಡಕ್ಕೆ ಬಂದಮೇಲೆ ದಿನಕರ ಒಂದೆ ರಡು ಇಂಗ್ಲಿಷ್ ಚಿತ್ರಕ್ಕೆ ಕರೆದೊಯ್ದಿದ್ದ. ಅವಳಿಗೆ ಅವು ತಿಳಿಯಲೂ ಇಲ್ಲ; ದಿನಕರ ನೋಡಗೊಡಲೂ ಇಲ್ಲ. ಮಂದಿಯಲ್ಲಿ ಅವನ ಸರಸ ಅವಳಿಗೆ ಹಿಡಿ ಯದೆ ಅವಳು ಮುಂದೆ ಚಿತ್ರಕ್ಕೆ ಹೋಗಲೇ ಇಲ್ಲ. ಪ್ರಭಾ ಬಂದಮೇಲೆ ಮ್ಯಾಟನೀಗೆ ಕರೆದೊಯ್ಯುತ್ತಾಳೆ. ಪಾತ್ರಧಾರಿಗಳ ಕುಲಗೋತ್ರ ಹೇಳು ತ್ತಾಳೆ. 'ಭಾರತೀದೇವಿ ಚಿಟ್ಟೆಯಂತೆ ಜಿಗಿದಾಡಬಾರದು' ಎನ್ನುತ್ತಾಳೆ. 'ಪಂಕಜ ಒಬ್ಬ ಹಾಡುತ್ತಾನೆ. ಉಳಿದವರು ಪ್ಲೇಬ್ಯಾಕ್‌ಗೆ ಬಾಯಿ ಬಡಿಯು ತ್ತಾರೆ—' ಎನ್ನುತ್ತಾಳೆ. ಕಮಲೆಗೆ ಬಾಯೇ ಇಲ್ಲ.

ದಿನಕರ ಮನೆಗೆ ಬಂದಾಗ ಕಮಲೆಯನ್ನು ಬಂಗಲೆಯಿಂದ ಕರೆತರ ಬೇಕು ಈಗ. ಇಲ್ಲವೆ ಕುಸುಮೆ ಕೀಲೀಕೈ ಕೊಡುತ್ತ 'ಸಿನೆಮಾಕ್ಕೆ ಹೋಗಿದ್ದಾರೆ' ಎನ್ನುತ್ತಾಳೆ. ಅವನಿಗೆ ಈಗ ತಿಂಗಳ ವೆಚ್ಚದಲ್ಲಿ ಊಲನ್- ದಾರಗಳ ಬಗ್ಗೆ ಹಣ ತೆತ್ತಬೇಕಾಗುತ್ತದೆ. ದಿನಕರನಿಗೆ ಒಂದು ಸ್ವೆಟರ್ ಹಾಕತೊಡಗಿದ ಕಮಲೆ ಬೇಸಗೆಗೇ ಮುಗಿಸಿದಳು. ಬಾಗಿಲಿಗೆ ದಾರದ ತೋರಣ ಬಂದಿದೆ. ಟೇಬಲ್ ಮೇಲಿನ ಬಟ್ಟೆಗೆ 'ಡಿಸೈನ್' ಆಗಿದೆ. ಖುರ್ಚಿಗೆ ಮೆತ್ತೆಗಳು ಬಂದಿವೆ. ದಿಂಬಿಗೆ 'ಸವಿಗನಸು' ಎಂಬ ಅಲಂಕಾರ ವಾಗಿದೆ. ಬಂಗಲೆಯಲ್ಲಿ ರಾಟೆಯಿದೆ. ಈಗ ಸಪ್ಲೈ ಕಾರಕೂನ ದಿನಕರನಿಗೆ ಮನೆಗೆ ಬಟ್ಟೆ ಒದಗಿಸುವದೊಂದು ಕೆಲಸ ಹೆಚ್ಚಿದೆ.

ಕಮಲೆಯ ಈ ಹುಚ್ಚಿಗೆ ಈಡಾಗಿ ದಿನಕರ ಕಣ್ಣುಕಣ್ಣು ಬಿಡುತ್ತಾನೆ. ಬಂದಾಗ ಬಾಗಿಲಲ್ಲೇ ಸ್ವಾಗತಿಸುತ್ತಿದ್ದ ಕಮಲೆಯ ಬೆನ್ನಿಗೆ ಈಗ ಪ್ರಭಾ- ವಲಯವಿದ್ದದ್ದೇ. ಅವಳು 'ಮಾಮಾ' ಎಂದು ದಿನಕರನನ್ನು ಕರೆಯು ತ್ತಾಳೆ. ಅವನನ್ನೂ ಸಿನೆಮಾ ಚರ್ಚೆಗೆ ಎಳೆಯುತ್ತಾಳೆ. ದಿನಕರ ಇಂಗ್ಲಿಷ್ ಚಿತ್ರದ ಸುದ್ದಿ ತೆಗೆದು ಮೊದಮೊದಲು ಪ್ರಭೆಯನ್ನು ಹೆದರಿಸಿಕೊಂಡ. ಈಗವಳು 'ಗೋದಾನ-ಭೂದಾನ' ಹಿಂದೀ ಕಾದಂಬರಿ ಸುದ್ದಿ ಸುರು

ಮಾಡಿದ್ದಾಳೆ. ಪ್ರೇಮಚಂದ, ಶರಚ್ಚಂದ್ರರನ್ನು ಜಪಿಸುತ್ತಾಳೆ. ಕಮಲೆಯೂ ನಡುನಡುವೆ ತಾನು ಓದಿದ ಕನ್ನಡ ಅನುವಾದಗಳ ನೆನಪಿನಿಂದ ಹೌದು; ಅಲ್ಲ ಎಂದು ಗೊಣಗುತ್ತಾಳೆ; ದಿನಕರ 'ಸಂಧ್ಯಾರಾಗ'ದ ಮೀನಾಕ್ಷಿ, 'ಮುರಳಿ ಮಣ್ಣಿಗೆ'ಯ ಪಾರೋತಿ-ಸರಸೋತಿಯರ ಸುದ್ದಿ ತೆಗೆದು ಪ್ರಭೆಯ ಚರ್ಚೆಯಿಂದ ಬಿಡುಗಡೆ ಹೊಂದಬೇಕಾಗುತ್ತದೆ.

ಇಬ್ಬರೇ ಇರುವ ಮನೆಯಲ್ಲಿಯೂ ಏಕಾಂತಕ್ಕೆ ಚ್ಯುತಿ ಬಂದಿದೆ. ಆದರೆ ದಿನಕರನಿಗೆ ಕಮಲೆ ಏನನ್ನೂ ಕಡಿಮೆ ಮಾಡಿಲ್ಲ. ಹೊತ್ತು-ಹೊತ್ತಿಗೆ ಚಹಾ, ತಿನಿಸುಗಳನ್ನು ಒದಗಿಸುತ್ತಾಳೆ. ಪೇಟೆಯ ಸಾಮಾನು ತರುವ ತೊಂದರೆ ಈಗ ಅವನಿಗಿಲ್ಲ. ಪ್ರಭೆಯೊಡನೆ ಹೋಗಿ ಎಲ್ಲಾ ತರುತ್ತಾಳೆ. ಒಮ್ಮೊಮ್ಮೆ ಪ್ರಭೆಯ ಒತ್ತಾಯಕ್ಕೆ ಮ್ಯಾಟಿನಿಗೆ ಹೋದರೂ ಕುಸುಮೆಯ ಮನೆಯಲ್ಲಿ ಚಹಾದ ವ್ಯವಸ್ಥೆಯಿರುತ್ತದೆ. ಅಂಥ ದಿನ ದಿನಕರ ತನ್ನ ಮನೆಯ ಪಡಸಾಲೆಯ ಎದುರು-ಬದರು ಗೋಡೆಯ ನಡುವಿನ ನೆಲ ಅಳೆಯುತ್ತ ಶತಪಥ ಹಾಕುತ್ತಿರುವಾಗಲೇ ಕಮಲೆ ಬಂದುಬಿಡುತ್ತಾಳೆ. 'ಚಹಾ ಆಯಿತೇ' ಎನ್ನುತ್ತಾಳೆ. ಅಪರಾಧಿನಿಯಂತೆ ನಿಂತು ಅವನ ಮುಖ ನೋಡುತ್ತಾಳೆ. ಅವಳ ನಿಸ್ಸಹಾಯ ನೋಟವನ್ನು ನೋಡಿ ದಿನಕರ ತನ್ನ ಬೇಸರ ಮರೆತು 'ಯಾವ ಸಿನೆಮಾ' ಎಂದು ಕೇಳಿ ಸಮಾಧಾನಪಡಿಸುತ್ತಾನೆ.

'ನಾನು ಕಮಲೆಗೆ ಏನು ಕಡಿಮೆ ಮಾಡಿದ್ದೇನೆ?' ಎಂಬುದೇ ದಿನಕರನ ಚಿಂತೆ. ಅವಳಿಗೆ ಮನೆಯಲ್ಲಿ ಒಬ್ಬಳಿಗೇ ಬೇಸರವಾಗುತ್ತದೆಂಬ ವಿಚಾರವನ್ನೂ ಅವನು ಮಾಡುತ್ತಾನಾದರೂ ಅದಕ್ಕೆ ಪರಿಹಾರ ತೋರುವ ದಿಲ್ಲ. ಪ್ರಭಾ ಬಂದಂದಿನಿಂದ ಅವಳು ಬೇಸರ ಮರೆತದ್ದೂ ಅವನು ಗಮನಿಸದೇ ಇಲ್ಲ. ಆದರೆ 'ತನ್ನ ಸಮಯ'ದಲ್ಲಿಯೂ ಪ್ರಭೆ ಪಾಲು ಬೇಡಿದರೆ ಅವನು ಹೇಗೆ ಸಹಿಸಿಕೊಂಡಾನು? ಒಂದು ದಿನ ತಡೆಯದೆ 'ನಿನಗೆ ನನ್ನ ಲಕ್ಷ್ಯವಿಲ್ಲ' ಎಂದು ಕಮಲೆಗೆ ಅಂದುಬಿಟ್ಟ. ಆಗ ಪ್ರಭೆಯೂ ಇದ್ದಳು. ಅವಳನ್ನು ಕುರಿತೇ ಆ ಮಾತನ್ನವನು ಆಡಿದ್ದನಾದರೂ ಕಮಲೆ-ಪ್ರಭೆ ಇಬ್ಬರೂ ಅದನ್ನು ಗ್ರಹಿಸಲಾರದೆ ಹೋದರು. ಕಮಲೆ ಅಳಹತ್ತಿದಳು. ಪ್ರಭೆ ಮನೆಗೆ ಹೋಗಿ ಕುಸುಮೆಗೆ ವರದಿ ಮಾಡಿದಳು.

ಕುಸುಮೆ ಎರಡು ಮಕ್ಕಳ ತಾಯಿ. ದಿನಕರನ ಹುಚ್ಚನ್ನು ಅವಳು

ತಿಳಿಯಬಲ್ಲಳು. ತನ್ನ ಪತಿಯ ಮುಂಚಿನ ಇದೇ ಮನೋಭಾವವನ್ನು ಅವಳು ನೆನಸಿಕೊಂಡಳು. ಅವಳಿಗೆ ನಗೆ ಬಂತು. ತಂಗಿಗೆ ಇದನ್ನು ಹೇಗೆ ತಿಳಿಯಪಡಿಸಬೇಕೆಂದು ಒಂದು ಕ್ಷಣ ಯೋಚಿಸಿದಳು. ಹೇಳಲೇಬೇಕೆಂದು ನಿಶ್ಚಯಿಸಿ " ಪ್ರಭಾ, ನಿನ್ನ ಮಾವಾ ಇದ್ದಾಗ ಕಮಲೆಯ ಬೆನ್ನು ಕಾಯ ಬೇಡ " ಎಂದರೆ " ನಾನೇನು ಮಾಡಿದ್ದೇನೆ ಅಂಥದು ? " ಎನ್ನುತ್ತಾಳೆ ಪ್ರಭಾ. " ಅದು ನಾಳೆ ನಿನಗೂ ತಿಳಿಯುತ್ತದೆ " ಎಂದು ಕುಸುಮೆ ಸುಮ್ಮ ನಾದಳು. ಇದನ್ನು ಕೇಳಿದ ಪ್ರಭೆ ' ಗಂಡ-ಹೆಂಡಿರ ಮಧ್ಯೆ ನಾನು ಬಂದಂತಾ ಯಿತೇ ? ' ಎಂದು ಚಿಂತಿಸಿದಳು. ' ಕಮಲೆ ಎಂದೂ ತನ್ನನ್ನು ಹಾಗೆ ನೋಡಲಿಲ್ಲವಲ್ಲ ' ಎಂದೂ ಅಂದುಕೊಂಡಳು. ಆದರೆ ದಿನಕರನನ್ನು ನೆನಸಿ ಕೊಂಡಾಗ ಅವಳಿಗೆ ಮಸಕು ಛಾಯೆ ಕಂಡಂತಾಯಿತು.

' ಗಂಡಸರದು ಇದು ಒಳ್ಳೆಯ ರುಚಿಯಲ್ಲ '—ಎಂದು ಅವಳ ವಾದ. ಅದನ್ನು ಪ್ರಕಟವಾಗಿಯೇ ಅಕ್ಕನ ಮುಂದೆ ಹೇಳಿದಳು. ಕುಸುಮೆ "ಅಯ್ಯೋ ಹುಚ್ಚಿ, ನಾಳೆ ನಿನ್ನ ಗಂಡನಿಗೆ ಈ ಮಾತು ಹೇಳುವಿಯಂತೆ. ಕಂಡವರ ರುಚಿಯ ಚಿಂತೆ ನಿನಗೇಕೆ ? " ಎನ್ನಬೇಕಾಯಿತು.

ದಿನಕರನಿಗೆ ಈ ನಡುವೆ ಇಸ್ಪೀಟು ಆಟವೂ ಎಳೆಯುತ್ತದೆ. ' ಮತ್ತೆ ಅದರಲ್ಲಿ ಮುಳುಗಿದೆನೆಂದರೆ ' ಎಂಬ ಭಯವೂ ಆಗುತ್ತದೆ. ಕಮಲೆಗೆ ಪ್ರಭೆಯೇ ಸಾಕಾದರೆ ತನಗೆ ಇಸ್ಪೀಟು ಅನಿವಾರ್ಯವೆನ್ನುತ್ತಾನೆ. ಇವರ ಮ್ಯಾಟಿನಿ ದಿನ ಅವನಿಗೆ ಕ್ಲಬ್ಬು ಎಳೆಯುತ್ತದೆ. ಇತ್ತೀಚೆ ಪ್ರಭೆ ಮಧ್ಯಾಹ್ನ ಮಾತ್ರ ಬಂದು ಒಂದೆರಡು ಗಂಟೆ ಕಮಲೆಯೊಡನೆ ಇದ್ದು ಹೋಗುತ್ತಾಳೆ. ಅವಳು ಹೋಗಿ ದಿನಕರ ಬರುವವರೆಗೂ ಕಮಲೆಗೆ ಏಕಾಂತ ಸಹನವಾಗುವ ದಿಲ್ಲ. ಮನೆಯ ಕೆಲಸಗಳೂ ಆಗ ಅವಳಿಗೆ ಕಾಣುವದಿಲ್ಲ.

ಒಂದು ದಿನ ದಿನಕರ ಮನೆಗೆ ಬರುವಾಗ ಮಧ್ಯರಾತ್ರಿಯಾಗಿದೆ. ಕಮಲೆ ಢಾಳವಾಗಿ ದೀಪ ಉರಿಸಿ ಪಡಸಾಲೆಯ ಗೋಡೆಗೆ ಕುಳಿತವಳು ಅಲ್ಲೇ ಒರಗಿ ನಿದ್ರಿಸಿದ್ದಾಳೆ; ಬಾಗಿಲು ತೆರೆದೇ ಇದೆ. ದಿನಕರ ಬಂದು ಅವಳನ್ನು ಎಬ್ಬಿಸಿ ದಾಗ ಗಾಬರಿಯಿಂದ ಚೀರಿಕೊಂಡಳು. ಬಂದವನು ತಾನು—ದಿನಕರ ಎಂದು ಅವಳಿಗೆ ಮನಗಾಣಿಸಿ ಕೊಡಬೇಕಾಯಿತು. ಎಚ್ಚತ್ತ ಕಮಲೆ ದಿನಕರನನ್ನು ಅಪ್ಪಿಕೊಂಡೇ ಕೇಳಿದಳು:

“ ಎಲ್ಲಿಗೆ ಹೋಗಿದ್ದಿರಿ ?—ಯಾವಾಗ ಬಂದಿರಿ ?”

“ ಎಲ್ಲೂ ಇಲ್ಲ; ಆಗಲೇ ಬಂದೆ.”

“ ನನ್ನನ್ನು ಯಾಕೆ ಎಬ್ಬಿಸಲಿಲ್ಲ ? ”

“ ಎಬ್ಬಿಸಿದ್ದೇನಲ್ಲ—ಕಮಲ, ನೀವು ಇಂದು ಮ್ಯಾಟಿನೀಗೆ ಹೋಗ ? ”

ಕಮಲೆ ‘ ಇಲ್ಲ ’ವೆಂಬಂತೆ ಗೋಣು ಆಡಿಸಿದಳು.

“ ನಾನು ಇನ್ನು ಕ್ಲಬ್ಬಿಗೆ ಹೋಗುವುದಿಲ್ಲ ” ವೆಂದು ನುಡಿದ ದಿನಕರ.

೮

ವೆಂಕಟರಾಯರು ಕಮಲೆಯನ್ನು ನೋಡಲು ಒಮ್ಮೆ ಬಂದರು. ಬರುವಾಗ ಅಳಿಯನಿಗೆ ಒಂದು ಸೈಕಲ್ ತಂದರು. ಮಗಳಿಗೆ ಒಂದು ಚಿನ್ನದ ಸರವನ್ನೂ ತಂದಿದ್ದರು. ಕಮಲೆ ಮನದಲ್ಲೇ ತಂದೆಗೆ ನಮಿಸಿ ಕುಣಿದಾಡಿದಳು.

ಶ್ರಾವಣ ಬಂದಿತ್ತು. ಮಗಳನ್ನು ಮನೆಗೆ ಕರೆಯಬೇಕೆಂದು ಬಯಸಿ ಕಮಲೆಯನ್ನು ಕೇಳಿದರೆ “ ಅವರನ್ನೇ ಕೇಳು ” ಎಂದಳು.

ದಿನಕರ ಅಂದು ಸೈಕಲ್ ಏರಿಕೊಂಡು ಆಫೀಸಿಗೆ ಹೋದವನು ಮಧ್ಯಾಹ್ನ ಚಹಾಕ್ಕೆ ಮನೆಗೇ ಬಂದಿದ್ದ. ಕಮಲೆಯ ಆಸೆ ಹಣ್ಣಾಗಿತ್ತು.

ಅಂದು ಸಂಜೆಯೂ ದಿನಕರ ಆರಕ್ಕೇ ಮನೆಗೆ ಬಂದ. ವೆಂಕಟರಾಯರು ಹೊರಕ್ಕೆ ಹೊರಟವರು ಅಳಿಯನನ್ನು ನೋಡಿ ನಿಂತರು.

“ ದಿನಕರರಾವ್, ಪಂಚಮಿ ಬಂದಿದೆ. ಹೆಣ್ಣುಮಕ್ಕಳನ್ನು ತವರಿಗೆ ಕರೆದೊಯ್ಯುವದು ಸಂಪ್ರದಾಯ ” ಎಂದರು.

ದಿನಕರನಿಗೆ ಒಮ್ಮೆಲೆ ಹೇಳಲು ಏನೂ ತೋಚಲಿಲ್ಲ. ರಾತ್ರಿ ಗಂಡ-ಹೆಂಡರಲ್ಲಿ ಮಾತು-ಕತೆ ನಡೆದು ದಿನಕರನೆಂದ :

“ ತವರಿನಲ್ಲಿ ಯಾರಿದ್ದಾರೆ ನಿನಗೆ—ಪಂಚಮಿಗೆ ಹೋಗಲಿಕ್ಕೆ ? ”

ಕಮಲೆಗೆ ತಾಯಿಯ ನೆನಪು ಉಕ್ಕಿ ಬಂದು ಕಳವಳವಾಯಿತು. ಆದರೆ ಅವಳ ಸ್ಥಳದಲ್ಲಿಯೇ ಇದ್ದ ತಂದೆ ಕರೆಯಬಂದಿದ್ದಾರೆ. ಆ ಮನೆಗೆ ಹೋದರೆ

ತಾನೇ ಪಂಚಮಿ ಮಾಡಬೇಕು—ಅದೇ ತಂದೆಗೆ ಸಮಾಧಾನ ತಂದೀತೆಂದು ಚಿಂತಿಸುತ್ತ ' ಇಲ್ಲಿ ಇವರು ಒಬ್ಬರೇ ಆಗುತ್ತಾರಲ್ಲ—ನಾನು ಹೋದರೆ ಮತ್ತೆ ಕ್ಲಬ್ಬು ಸೇರುತ್ತಾರೆ ' ಎಂದು ವಿವಂಚನೆಗೊಳಗಾಗಿ,

" ನಿಮಗೆ ರಜೆ ಸಿಗುವುದಿಲ್ಲವೇ " ಎಂದಳು.

" ಪಂಚಮಿಗೆ ಹುಡುಗಿಯರಿಗೇ ರಜೆ ಸಿಗುವುದಿಲ್ಲ. ಇನ್ನು ನನಗೆ ಹೇಗೆ ಸಿಗಬೇಕು ? " ದಿನಕರನೆಂದ.

" ನಿಮ್ಮ ಕಚೇರಿಯಲ್ಲಿ ಹುಡುಗಿಯರಿದ್ದಾರೆಯೇ ? "

" ಇದ್ದಾರೆ; ದಿನಾ ಜೋಕಾಲಿ ಆಡಿಸುತ್ತಾರೆ ನಮ್ಮನ್ನು. "

" ಏನು ಮಾತಿದು ? "

" ನಾನು ಮನೆಯ ಹುಡುಗಿಯರ ರಜದ ಬಗ್ಗೆ ಹೇಳಿದೆ. "

" ಮತ್ತೆ ನೀವೇ ಇಲ್ಲಿ ಸಾಹೇಬರು ! ಇರಲಿ; ಅಪ್ಪನಿಗೇನು ಹೇಳುತ್ತೀರಿ ? "

" ಏನಾದರೂ ನೀನೇ ಹೇಳಿ ಕಳಿಸು. "

" ಅವರೇನು ನಿಮ್ಮಲ್ಲಿ ಇರುವದಕ್ಕೆ ಬಂದಿಲ್ಲ. "

" ಇರುವದಕ್ಕೆ ನಾನು ಬೇಡವೆಂದೆನೆ ?

" ಮತ್ತೆ ಕಳಿಸು ಎನ್ನುತ್ತೀರಿ ? "

" ನಾನು ಅಂದೇ ಕರೆದಿಲ್ಲವೇ ? "

" ಅವರು ಹೇಗೆ ಬಂದು ಇದ್ದಾರು ? "

" ಅದಕ್ಕೇನು ? ಆದರೆ ಅವರಿಗೆ ಲೌಕಿಕದ್ದೇ ಹೆದರಿಕೆ !"

" ಹೌದು ಮತ್ತೆ. ಜನ ಏನೆಂದಾರು ?"

" ಜನದ್ದೇನು ಗಂಟುಹೋಗುತ್ತದೆ ? ಏನಾದರೂ ನೀನೇ ಹೇಳು."

" ಬೇಕಾದರೆ ನೀವೇ ಹೇಳಿರಿ."

" ನಿನಗೆ ಹೋಗಲು ಇಷ್ಟವೇ ?"

" ನೀವೂ ಬಂದರೆ ! "

" ನಾನು ಹೇಗೆ ಬರಲಿ ಕಮಲ ? ನಿನ್ನನ್ನು ಮಾತ್ರ ಕರೆಯುತ್ತಾರೆ."

" ಯಾಕೆ ? ನಿಮಗೂ ರಜಾ ತಗೊಳ್ಳಲು ನನಗೆ ಹೇಳಿದ್ದಾರೆ."

" ರಜಾಕೊಡುವವಳು ನೀನೇ ಏನು ? ಅಂತೇ ಕೊಟ್ಟು ಹೋಗ ಬೇಕೆನ್ನುತ್ತೀ."

" ನಿಮ್ಮದೊಂದು ಮಾತು !"

" ಹೌದು ಕಮಲ, ನಾನು ನಿನಗೆ ಹೇಗೆ ರಜಾಕೊಡಲು ಬಯಸುವ ದಿಲ್ಲವೋ ಹಾಗೇ ಸಾಹೇಬರು ನನ್ನನ್ನು ಬಿಡುವದಿಲ್ಲ—ಅಷ್ಟು ಪ್ರೀತಿ ಅವ ರಿಗೆ ನನ್ನ ಮೇಲೆ."

" ಹಾಗಾದರೆ ನೀವು ನನ್ನ ಸಾಹೇಬರೇನು ? "

" ಅಲ್ಲವೇನು ? ಅಲ್ಲದೇ ನಮ್ಮ ಸಾಹೇಬರು ನಿನಗೆ ನಾನಿದ್ದ ಹಾಗೆ!"

" ಯಾರು ಹಾಗೆಂದರು ? ರಜಾ ಮಂಜೂರ ಮಾಡಿರಿ ಸಾಹೇಬರೇ."

" ನನ್ನ ಗತಿಯೇನು ಮಿಸ್ಟರ್ ? "

" ಛೀ. "

" ಬೆಳಗಾವಿಗೇ ಕ್ಯಾಂಪ್ ಹೋಗಬೇಕು. ರಜಾ ಸಾಧ್ಯವಿಲ್ಲ."

ಈ ಸರಸದಲ್ಲಿಯೇ ಇಬ್ಬರೂ ನಿದ್ದೆ ಹೋದರು. ಬೆಳಗ್ಗೆ ಏಳುವಾಗ ಕಮಲೆಗೂ ತಡವಾಯಿತು. ವೆಂಕಟರಾಯರೇ ಮುಂಚೆ ಎದ್ದವರು ನೀರು ಕಾಸಿದ್ದರು. ಕಮಲೆಗೆ ನಾಚಿಕೆಯಾಯಿತು.

" ದಿನಾ ಹೀಗೇ ಮಾಡುವಿಯಾ, ಕಮೂ?"

" ಇಲ್ಲ ಅಪ್ಪ. ಇಂದೇ ತಡವಾಯಿತು."

" ಹಾಗಾದರೆ ಇಂದು ಹೊರಡಲು ಪರವಾನಿಗೆ ಸಿಕ್ಕಿರಬೇಕು " ಎಂದು ವೆಂಕಟರಾಯರು ನಕ್ಕರು.

" ಅವರು ರಜಾ ತಗೊಂಡು ಬರಲಿ. ನಾವು ಎರಡು ದಿನ ಮುಂಚಿತ ಹೋಗಬೇಡವೇ ? ನೀನು ಬಿಟ್ಟು ಬಂದ ಮನೆ ನಿನಗೇ ಪರಿಚಯವಾಗಲಿ ಕ್ಕಿಲ್ಲ. ನಾನು ತಿರುಪತಿ, ಗೋಕರ್ಣ ಸುತ್ತಾಟದಲ್ಲೇ ಇದ್ದೆ. ಅವರು ಅಲ್ಲಿಗೆ ಬರುವಾಗ ನಿನ್ನನ್ನು ಅಂದು ನೋಡಲಿಕ್ಕೆ ಬಂದ ಮನೆ, ನಿನ್ನನ್ನು ಕೈ ಹಿಡಿದ ಮನೆ ಎಂದು ಅವರಿಗೆ ಗೊತ್ತಾಗಬೇಡವೇ ?"

" ನೀನೇ ಹೇಳು."

" ಹೇಳುತ್ತೇನೆ—ಅದಕ್ಕೇನು ?"

" ಮತ್ತೆ ಪಂಚಮಿಮಾಡಿ ಅವರು ಒಬ್ಬರೇ ಬರಲಿಕ್ಕಿಲ್ಲ."

" ನಿಮ್ಮ ಸಂತೋಷ, ಕಮೂ."

ದಿನಕರನೂ ಕಣ್ಣೊರಸಿಕೊಂಡು ಬಂದ. ವೆಂಕಟರಾಯರು ಒಲೆಯ ಮುಂದೆ ಕುಳಿತವರು ಎದ್ದು ಹೊರಗೆ ಬಂದರು.

ಚಹಾ ಕುಡಿಯುವಾಗ ಪ್ರಸ್ತಾಪತೆಗೆದು, ಅಳಿಯನಿಗೆ ಹೇಳಿದರು. ದಿನಕರ " ನೀವೇ ಇಲ್ಲಿ ಇದ್ದು ಬಿಡಬಹುದಲ್ಲ" ಎಂದ.

" ನಾನು ಅಂದೇ ಹೇಳಿರುವೆನಲ್ಲ—ದಿನಕರರಾವ್, ನಾನು ಈಗ ತೀರ್ಥಯಾತ್ರೆ ಎರಡು ಮುಗಿಸಿದೆ. "

" ಇಂದು ಸಾಹೇಬರನ್ನು ಕೇಳಿ ನೋಡುತ್ತೇನೆ. "

" ನಿಮ್ಮ ಸಾಹೇಬ ನನ್ನ ಜೊತೆಗೆ ಕೆಲಸ ಮಾಡಿದವ. ಅವನಿಗೆ ನಾನು ನಿನ್ನೆ ಮನೆಯಲ್ಲಿಯೇ ಹೇಳಿದ್ದೇನೆ. "

" ನೀವೇಕೆ ಕೇಳಿದಿರಿ ? ಏನೆಂದರು ? "

" ಅದಕ್ಕೇನಾಯಿತು? ಮೊದಲು ಚೇಷ್ಟೆ ಮಾಡಿದ. ಮುದುಕನಾದರೂ ಅವನಿಗೆ ಬುದ್ಧಿಯಿಲ್ಲ. ಕಡೆಗೆ ಆಗಲಿ ಎಂದ. "

* * * *

ಆಫೀಸಿಗೆ ಹೋಗುತ್ತಲೇ ದಿನಕರ ರಜಾದ ಅರ್ಜಿ ಕಳಿಸಿದ. ಮಧ್ಯಾಹ್ನ ಅಂದು ದಿನಕರನಿಗೆ ಸಾಹೇಬರಿಂದ ಕರೆ ಬಂತು. ದಿನಕರ ಭಯ ಮಿಶ್ರಿತ ಸಂಕೋಚದಿಂದ ಒಳಕ್ಕೆ ಹೋದ. ಸಾಹೇಬರು ಕೂಡ ಹೇಳಿದರು. ದಿನಕರ ಅಂಜಂಜುತ್ತ ಖುರ್ಚಿಯ ತುದಿಯಲ್ಲೇ ಕುಳಿತ. ಸಾಹೇಬರು ನಗು ನಗುತ್ತ—

" ಅಳಿಯನಿಗೇನು ನಜರಾಣಿ ಸಿಕ್ಕಿದೆ ? " ಎಂದರು.

ದಿನಕರನಿಗೆ ಆಗ ಆಫೀಸಿನ ಕೆಲಸದ ಕರೆಯಿದಲ್ಲವೆಂದು ಖಾತ್ರಿಯಾಯಿತು. ದಿನಕರ ಸುಮ್ಮನೆ ಕೈಹೊಸೆಯುತ್ತ ನಗುತ್ತಿದ್ದ.

" ಅಲ್ರೀ, ದೇಶಪಾಂಡೆ, ಮಾವನಿಗೆ ಒಮ್ಮೆಲೆ ಹೇರ್‌ಕಟ್ ಸುರು ಮಾಡಿದಿರಲ್ಲ ! "

" ನಾನೇನು ಮಾಡಿದೆ ಸಾರ್. "

ಸಾಹೇಬರು ಗಂಟೆ ಬಾರಿಸಿದರು. ಕಾಸೀಮ ಬಂದ.

" ಕಾಸೀಮ್, ಆಫೀಸಿನಲ್ಲಿ ಹೊಸ ಸೈಕಲ್ ಯಾರದೋ ? "

ಕಾಶೀಮ ಹಳೆಯ ಸಿಪಾಯಿ. ಸಾಹೇಬರಿಗೆ ಅವನು ಹೆದರುವದೇ ಇಲ್ಲ. ವೆಂಕಟರಾಯರನ್ನೂ ಬಲ್ಲ ಅವನು ನಗುತ್ತ ಹೇಳಿದ:

" ದೇಶಪಾಂಡೆ ರಾವ್‌ಸಾಬಕಾ ಸಾಬ್. "

" ಎಷ್ಟಕ್ಕೆ ಕೊಂಡಿರಿ ದೇಶಪಾಂಡೆ ? "

ಕಾಶೀಮನೇ ಹೇಳಿದ :

" ವೆಂಕಟರಾವ್ ರಾವಸಾಬ್ ದಿಯಾ ಹೈ ಸಾಬ್. "

" ತುಂ ಬಾಹೇರ್ ಜಾರೇ, ಕಾಶೀಮ. "

" ಅಚ್ಛಾ ಸಾಬ್ " ಎಂದು ಅವನು ಅಲ್ಲೇ ನಿಂತಿದ್ದ.

ಸಾಹೇಬರು ದಿನಕರನ ರಜಾ ಮಂಜೂರ್ ಮಾಡಿದ ಕಾಗದ ಅವನಿಗೆ ಕೊಟ್ಟರು. ದಿನಕರ ನೋಡಿ ಕೃತಜ್ಞತೆಯಿಂದ ಕೈಮುಗಿದ. ಒಂದು ವಾರ ಕೇಳಿದ್ದರೆ ಇಡೀ ವಾರ ಮಂಜೂರಾಗಿತ್ತು.

ಕಾಶೀಂ ಅಲ್ಲೇ " ಸಲಾಂ " ಮಾಡಿದ ದಿನಕರನಿಗೆ.

ಸಾಹೇಬರು, " ತುಂ ಬಹುತ್ ಬೇಕೂಫ್ ಆದ್ಮಿ ಹೈ. ನಿಕಲ್ ಜಾವ್ ಯಂಹಾಸೇ " ಎನ್ನುತ್ತ ತಾವೇ ಎದ್ದು ಹೊರಗೆ ಹೋದರು.

## ೬

ಬೆಳಗಾವಿಗೆ ಬಂದ ದಿನಕರ ದಂಪತಿಗಳನ್ನು ಗೆಳೆಯರು ಬಹಳ ಉತ್ಸಾಹದಿಂದ ಸ್ವಾಗತಿಸಿದರು. ದಿನಕರನಿಗೆ ಸಾಮಾಜಿಕ ಪ್ರಜ್ಞೆಯೊಡನೆ ಬೆಳೆದುಬಂದ ಅಸಡ್ಡೆಯು ಬಹುಮಟ್ಟಿಗೆ ದಿಕ್ಕುಬದಲಿಸುವಂತಾಯಿತು. ತಾನೂ ಒಬ್ಬ ಸದ್ಗೃಹಸ್ಥನೆಂದು ಜನ ಒಪ್ಪುತ್ತಾರೆಂದು ಅವನು ಪ್ರಥಮತಃ ಕಂಡುಕೊಂಡ. ಜನ—ಸಮಾಜವೆಂಬುದು ಅವನ ದೃಷ್ಟಿಯಲ್ಲಿ ಗೆಳೆಯರ ಬಳಗದಿಂದ ಬಹಳ ಹೊರಗಿನದಲ್ಲ. ದಿನಕರನ ಒಂಟಿ ಜೀವನದಲ್ಲಿ, ತಾಯಿಯೊಡನಿದ್ದ ವಿದ್ಯಾರ್ಥಿ ಜೀವನದಲ್ಲಿ ಅವನಿಗೆ ಇನ್ನೊಬ್ಬರ ಮನೆಗೆ ಹೋಗಿ, ಅವರೊಡನೆ ಮಿಲಿತವಾಗಿ ಇದ್ದು ಅಭ್ಯಾಸವಿಲ್ಲ. ಆದರೆ ಅವನಲ್ಲಿಯೇ ಬಂದು ಹರಟುವ ಗೆಳೆಯರು ಅವನ ನವಕರಿಯ ಪ್ರಾರಂಭದ ಜೀವನದಲ್ಲಿಯೂ ಇವನನ್ನು ಒಬ್ಬ ಗೃಹಸ್ಥನೆಂಬಂತೆ ಕಂಡಿರಲಿಲ್ಲ. ಇಂದು ಒಬ್ಬ

ರೊಬ್ಬರಂತೆ ಗೆಳೆಯರು ಇವನನ್ನು ಮನೆಗೆ ಆಮಂತ್ರಿಸುತ್ತಾರೆ. ಅಪ್ತರಂತೆ ಇಬ್ಬರನ್ನೂ ತಮ್ಮಲ್ಲಿ ಬರಮಾಡಿಕೊಂಡು ನಕ್ಕು—ಕಲೆದು ಕಮಲೆಗೆ ಕುಂಕುಮ ಖಣ ನೀಡಿ ಕಳಿಸುತ್ತಾರೆ. ಕಮಲೆಯಿಂದಾಗಿ, ಇಲ್ಲವೆ ಅವಳನ್ನು ತಾನು ಕೈಹಿಡಿದುದರಿಂದಾಗಿ ತನಗೆ ಈ ಒಂದು ಸ್ನೇಹ ದರ್ಶನವಾದುದನ್ನು ಅವನು ಚಿಂತಿಸುತ್ತಾನೆ. ಕಮಲೆಗೆ ಇನ್ನೂ ಹೆಚ್ಚಿನ ಆಮಂತ್ರಣಗಳು ! ಅವಳ ಗೆಳತಿಯರು, ನೆರೆಯವರು ಅವಳನ್ನು ಮುತ್ತಿ ಸೆಳೆದೊಯ್ಯುತ್ತಾರೆ. ನಗೆ, ನಾಚಿಕೆ, ಸೌಕುಮಾರ್ಯ, ವಯಸ್ಸಿಗೆ ಕೊಂಚ ಮೀರಿದ ಗಾಂಭೀರ್ಯ ಇವು ಗಳಿಂದ ಆಕರ್ಷಕಳಾಗಿ ಕಾಣುವ ಅವಳನ್ನು ನೋಡುತ್ತ ತನ್ನ ಬಾಳಿಗೊಂದು ಒಪ್ಪವನ್ನು ತಂದ ಅವಳಿಗೆ ಮನದಲ್ಲಿಯೇ ಕೃತಜ್ಞತೆಯನ್ನರ್ಪಿಸುತ್ತಾನೆ.

ದಿನಕರ ಅಲ್ಲಿದ್ದಾಗ ಕಮಲೆಗೆ ಧಾರವಾಡಕ್ಕಿಂತ ಸ್ವಲ್ಪ ಬೇರೆ ಬಗೆಯ ಸ್ವಾತಂತ್ರ್ಯ ದೊರೆತಂತಿದೆ. ಅವನು ಕರೆದ ಸ್ನೇಹಿತರ ಮನೆಗೆ ಅವಳು ಇವ ನೊಡನೆ ಬರುತ್ತಾಳೆ. ಆದರೆ ಅವನ ಅನಿರ್ದಿಷ್ಟ ಸುತ್ತಾಟಕ್ಕೆ ಅವಳ ಸಮ್ಮತಿ ಯಿಲ್ಲ. ಅದಕ್ಕೆಂದೇ ಈಗ ಅವನು ಅವಳ ಅವಿರತ ಸಂಗದ ಬಯಕೆಗೆ ಸಿನೆಮಾ—ಮತ್ತೊಂದು, ಪೇಟೆ—ಹೀಗೆಲ್ಲ ಕಾರಣ ಒಡ್ಡಿ ಅವಳನ್ನು ಜತೆಗೆ ಸೆಳೆದುಕೊಂಡು ಊರು ಸುತ್ತುತ್ತಾನೆ. ಹಾಗೆ ಸುತ್ತುವುದರಲ್ಲಿ ಅವನಿಗೆ ಒಂದು ಬಗೆಯ ಮದ ಬಂದಂತಾಗುತ್ತದೆ. ಅದೇ ಊರಲ್ಲಿ ತನ್ನನ್ನು ಹೀಯಾಳಿಸಿದಂತೆ ನೋಡಿದ ಜನರ ಮುಂದೆ ಹೀಗೆ ಸುಳಿವುದರಲ್ಲಿ, ಅವರ ಕಣ್ಣಿಗೆ ತಮ್ಮ ತಿರು ಗಾಟದಿಂದ ಚುಚ್ಚುವಲ್ಲಿ ಅವನಿಗೆ ಆನಂದವಾಗುತ್ತಿದೆ. ಕಮಲೆಗೆ ಇದೆಲ್ಲಾ ತಿಳಿಯದು. ಅವಳಿಗೆ ಬಿಡುವೇ ಇಲ್ಲ. ಗೆಳತಿಯರ ಕಾಟ, ಗಂಡನ ಕಾಟ, ಮನೆ ಕೆಲಸಗಳ ಕಾಟಗಳ ತ್ರಿಕೂಟದಲ್ಲಿ ಅವಳು ತನ್ನನ್ನು ತೊಡಗಿಸಿಕೊಂಡು ಚಟುವಟಿಕೆ ತೋರುತ್ತಾಳೆ.

ಅವಳನ್ನೂ ಗೆಳತಿಯರು ಇಂದಿನಂತೆ ಹಿಂದೆ ಎಂದೂ ಬಳಸಿಕೊಂಡ ದ್ದಿಲ್ಲ. ಮನೆಗೆ ಕರೆದಾಗಲೂ ಸತ್ಕರಿಸಿದ್ದಿಲ್ಲ. ಇಂದಾದರೆ ಎಲ್ಲೂ ಹಬ್ಬ ಅವಳ ಪಾಲಿಗಿದೆ. ಅವಳ ಗೆಳತಿಯರು ಮದುವೆಯಾದವರು ತವರಿಗೆ ಬಂದವ ರಿದ್ದಾರೆ; ಕುಮಾರಿಯರೂ ಇದ್ದಾರೆ. ತನ್ನ ಗೆಳೆಯರು ಇಬ್ಬರನ್ನೂ ಕರೆದಂತೆ ಅವಳ ಗೆಳತಿಯರು ಕರೆಯುವದಿಲ್ಲವೇಕೆ—ಎಂದು ದಿನಕರ ಚಿಂತಿಸುತ್ತಾನೆ.

ಕಮಲೆಯ ಮುಂದೆ ನಗೆಯಲ್ಲಿ ಈ ಮಾತು ಆಡಿಯೂ ಬಿಟ್ಟ. ಅವಳು ಪರಿಹಾರ ಸೂಚಿಸಿದಳು:

" ಇದು ಅವರ ತಂದೆ ತಾಯಿಯರ ಮನೆ. ನಾನಾದರೂ ಈ ಮನೆಗೆ ಗೆಳತಿಯರನ್ನು ಮಾತ್ರ ಕರೆಯಬಲ್ಲೆನಾಗಲಿ, ಅವರ ಪತಿಯರನ್ನಲ್ಲ " ಎಂದು ಹೇಳಿದಳು.

" ಧಾರವಾಡದ ನಿನ್ನ ಮನೆಗೆ ಗೆಳತಿಯರನ್ನೂ ಅವರ ಗಂಡಂದಿರೊಡನೆ ಕರೆಯುತ್ತೀಯಾ ?" ಎಂದ.

" ಅವಶ್ಯವಾಗಿ ! ಯಾಕೆ ? ನಿಮಗೆ ಸಮ್ಮತವಿಲ್ಲವೇ ?"

" ನಾನು ಬೇಡವೆಂದೆನೆ ? ನೀನು ಇದುವರೆಗೆ ಯಾರನ್ನೂ ಹಾಗೆ ಕರೆಯಲಿಲ್ಲವಲ್ಲ ?"

" ಯಾರನ್ನು ಕರೆಯಲಿ ? ಯಾರೂ ಧಾರವಾಡಕ್ಕೆ ಬರಲಿಲ್ಲವಲ್ಲ ? ಊರಿಂದ ಕರೆಸುವದಿದೆಯೆ ? ಅಲ್ಲಿಯೇ ಕಂಡರೆ ಕರೆದೇನು."

ದಿನಕರನ ಸ್ನೇಹಿತರಲ್ಲಿ ಒಬ್ಬರಿಬ್ಬರು ಅವನ ಧಾರವಾಡದ ಮನೆಗೆ ಬಂದು ಹೋಗಿದ್ದಾರೆ. ಆದರೆ ಒಬ್ಬೊಬ್ಬರೇ ಕೆಲಸದ ಮೇಲೆ ಬಂದವರನ್ನು ಅವನು ಮನೆಗೆ ಕರೆದು ಸತ್ಕರಿಸಿದ್ದ. ಆದರೆ ಪತ್ನೀಸಮೇತವಾಗಿ ಅವನೇನು ಆಮಂತ್ರಿಸಿರಲಿಲ್ಲ. ಅದಕ್ಕೆ ಕಾರಣವೊಂದು ಬೇಕಾಗುತ್ತದೆ—ಎಂದು ಇಂದು ಕಮಲೆಯ ಮಾತಿನಿಂದ ಕಂಡುಕೊಂಡ. ಕಾರಣವೇ ಕರೆಗೆ ಪ್ರಚೋದನೆಯಲ್ಲದೆ ಪ್ರಚೋದನೆ ಕಾರಣವನ್ನರಸಿ ಹೊರಟರೆ ಹೇಗೆ ?

ದಿನಕರನ ವಾರದ ರಜೆ ಸರಿಯಿತು. ಮಗಳ ಮದುವೆ ಮಾಡಿದ ವೆಂಕಟರಾಯರು ಒಬ್ಬರೇ ಮನೆಯಲ್ಲಿರಲಾರದೆ ತೀರ್ಥಯಾತ್ರೆ ಮಾಡಿ ಬಂದವರು ಸ್ವಲ್ಪ ಅಸ್ವಸ್ಥರಾಗಿದ್ದಾರೆ. ಕಮಲೆಯೂ ದಿನಕರನ ಕೂಡ ಹೊರಟರೆ ಅವರನ್ನು ನೋಡಿಕೊಳ್ಳುವವರಿಲ್ಲ. ಇದನ್ನು ಕಂಡೂ ಕಾಣದಂತೆ ದಿನಕರ ವರ್ತಿಸಲಾರ. ಅವನೊಬ್ಬನೇ ಆ ಭಾನುವಾರ ಸಂಜೆ ಧಾರವಾಡಕ್ಕೆ ಹೊರಡುವಂತಾಯಿತು.

ಸ್ಟೇಶನ್ನಿನವರೆಗೆ ಕಮಲೆಯೂ ಬರಬೇಕೆಂದು ಅವನ ಆಸೆ. ಅದನ್ನು ಎತ್ತಿ ಆಡಲಾರ. ಕಮಲೆ ತಾನಾಗಿ ಬರುವ ಸೂಚನೆ ಕಾಣಲಿಲ್ಲ. ವೆಂಕಟರಾಯರು ಅಸ್ವಸ್ಥತೆಯಲ್ಲಿಯೇ ಎದ್ದು ಕಳಿಸಲು ಹೊರಟರು. ಅದನ್ನು

ನೋಡಿದ ಕಮಲೆ "ಬೇಡ ಅಪ್ಪಾ, ನಾನು ಹೋಗಿ ಕಳಿಸಿ ಬರುತ್ತೇನೆ." ಎಂದಳು. ಕಮಲೆಗೂ ನೆಪ ಬೇಕಾಗಿತ್ತು; ದಿನಕರನಿಗೆ ಅದೇ ಸಾಕಾಗಿತ್ತು. ವೆಂಕಟರಾಯರದೂ ಸಮಸ್ಯೆ ಬಗೆಹರಿಯಿತು.

ಡಮಣಿಯಲ್ಲಿ ಇಬ್ಬರೂ ಹೊರಟರಾಗಲಿ ಒಬ್ಬರೂ ಮಾತಾಡಲಿಲ್ಲ. ಸ್ಟೇಶನು ಹತ್ತಿರವಾದುದನ್ನು ನೋಡಿ ದಿನಕರ ಕಮಲೆಯ ಎದುರು ಕುಳಿತವನು ಬದಿಗೆ ಬಂದ. ಸಾರಥಿ ಮರೆಗೇ ಇದ್ದುದನ್ನು ನೋಡಿ ಕಮಲೆಯನ್ನು ಸೆಳೆದುಕೊಂಡ. ಅವಳು ಜೋಮಾಲೆಯಾಗಿ ಅವನ ತೊಡೆಯ ಮೇಲೆ ಒರಗಿದಳು. ಬಾಗಿ ಮುತ್ತಿಟ್ಟ ದಿನಕರ, 'ಬೇಗ ಬರುವಿಯಾ ?' ಎಂದ. 'ಹೂಂ' ಎಂಬಂತೆ ಕಮಲೆ ಗೋಣು ಹಾಕಿದಳು. ಸ್ಟೇಶನು ಬಂತು. ಇಳಿದು ಟಿಕೀಟು ತೆಗೆದುಕೊಂಡು ಒಳಹೊಕ್ಕರು. ಗಾಡಿ ಇನ್ನೂ ಬಂದಿಲ್ಲ. ಸ್ಪೆನ್ಸರ್ ಹೊಕ್ಕು ಚಹಾ ಕುಡಿದರು. ಗಾಡಿಬಂದು ದಿನಕರ ಹೊರಟುನಿಂತಾಗ ಕಮಲೆಯೇ ಮೆಲ್ಲಗೆ ಹೇಳಿದಳು: 'ಪತ್ರ ಬರೆಯಿರಿ' ಎಂದು. ಅವಸರದಲ್ಲಿ 'ನೀನು ?' ಎಂದ ದಿನಕರ. 'ನಿಮ್ಮ ಸುದ್ದಿ ನನಗೆ ತಿಳಿಯಬೇಕು' ಎಂದಳು. 'ನನಗೆ ?' ಎಂದು ದಿನಕರ ಅನ್ನುವಾಗ ಗಾಡಿ ಬಿಟ್ಟಿತ್ತು. ನಿಂತಲ್ಲಿಯೇ ನಿಂತ ಕಮಲೆ ಏನೆಂದು ಹೇಳಿದಳೋ ಅವನಿಗೆ ಕೇಳಲಿಲ್ಲ.

ಗಾಡಿ ಹೊರಟು ಹೋಗಿದೆ. ಸ್ಟೇಶನ್ನು ಬರಿದಾಗಿದೆ. ಕಸಗುಡಿಸುವವರು ಧೂಳು ಎಬ್ಬಿಸಿದ್ದಾರೆ. ಕಮಲೆ ಒಬ್ಬಳೇ ಒಂದು ಕಂಬಕ್ಕೆ ಆತುನಿಂತವಳು ಎಚ್ಚರಗೊಂಡಾಗ ಇಳಿಹೊತ್ತಾಗಿತ್ತು. ಮೆಲ್ಲನೆ ಹೊರಕ್ಕೆ ಬಂದಳು. ಟಾಂಗಾ-ಗಾಡಿಗಳು ಒಂದೂ ಇದ್ದಿಲ್ಲ. ನಡೆದುಕೊಂಡೇ ಹೊರಟಳು. ಕಾಲು ಬಹಳ ಒಜ್ಜೆ ಎನಿಸಿವೆ. ಮನಸ್ಸೂ ಭಾರವಾಗಿದೆ. ಅನೇಕ ಬಾರಿ ಬಂದು ಹೋದ ದಾರಿ ಅಪರಿಚಿತವಾಗಿ ಕಾಣುತ್ತಿದೆ. ಆರು ತಿಂಗಳಲ್ಲಿ ಬೆಳಗಾವಿಯೇ ಬದಲಾಗಿದೆಯೆಂದುಕೊಂಡಳು.

ಆರು ತಿಂಗಳಲ್ಲಿ ತಾನು ಬದಲಾದುದನ್ನವಳು ಅರಿಯಳು. ಇನ್ನೊಬ್ಬನಿಗೆ ನೆರಳಾಗಿ, ಅಷ್ಟು ಹತ್ತಿರದವಳಾಗಿ, ಬಿಟ್ಟೂಬಿಡದೆ ಅವನದೇ ಚಿಂತನೆಯಾದರೂ ದಣಿಯದೆ ಇದ್ದು ಬಂದ ತಾನು ಬದಲಾದುದನ್ನು ಅವಳು ತಿಳಿಯದಾದಳು. ಅದೇ— ಅವನನ್ನು ಚಿತ್ರಿಸಿಕೊಳ್ಳುತ್ತಾಳೆ. ಗಾಡಿಯಲ್ಲಿ ನಿಂತು ಕೈ ಬೀಸಿದ ದಿನಕರ ತನ್ನನ್ನು ತೆರವುಮಾಡಿ ಹೋದನೇ ಎಂದುಕೊಳ್ಳುತ್ತಾಳೆ.

ಆದರೆ ಅವನು ಹೋಗೇ ಇಲ್ಲ. ಅವಳ ಅಂತರಾಳದಲ್ಲಿ ನೆಲೆಯಾಗಿ ನಿಂತು ಬಿಟ್ಟಿದ್ದಾನೆ. ತಾನು ನಿಸ್ಸಹಾಯಳಾಗಿದ್ದಾಳೆ. ಅವನೇ ಸೂತ್ರಧಾರ; ತಾನೊಂದು ಗೊಂಬೆ. ಅವಳು ಅದನ್ನೇ ಬಯಸುತ್ತಾಳೆ.

" ಬಾಜೂ, ಬಾಜೂ—ಬಾಯೀ."

ಟಾಂಗಾದವನ ಕೂಗು. ನಡುದಾರಿಯಲ್ಲಿಯೇ ಹೊರಟ ಕಮಲೆ ಬದಿಗೆ ಸರಿದಳು. ಸ್ವಲ್ಪ ಅವಸರದಿಂದ ಕಾಲುಹಾಕಿ ಮಾರುತಿ ಗುಡಿಗೆ ಬಂದು ಕಾಯಿ ಒಡೆಸಿಕೊಂಡು, ಪ್ರಾಣದೇವರಿಗೆ ತನ್ನ ಮೌನ ಪ್ರಾರ್ಥನೆಯನ್ನರ್ಪಿಸಿ ಮನೆಗೆ ಬರುವಾಗ ಕತ್ತಲಾಗಿತ್ತು.

## ೧೦

ನಿಲ್ದಾಣವನ್ನು ಬಿಟ್ಟ ಗಾಡಿ ಠಳಕವಾಡಿಯ ವಿಸ್ತರಣವನ್ನು ದಾಟಿ ಗದ್ದೆಗಳ ಹಸುರಿನ ನಡುವೆ ಓಡುತ್ತಿದೆ. ಎಲ್ಲ ಕಡೆಗೂ ನೀರು. ಮಳೆಯೂ ಜಿಟಿ-ಜಿಟಿ ಹಿಡಿದಿದೆ. ದಿನಕರ ಕಿಟಕಿಯಲ್ಲೇ ಮುಖವಿಟ್ಟುಕೊಂಡು ನೋಡುತ್ತಿದ್ದಾನೆ. ಅವನಿಗೆ ಹೊರಗಿನ ನೋಟದಲ್ಲಿ ಗದ್ದೆ-ಹಸಿರು-ನೀರು-ಮಳೆ-ಮಂಜುಗಳ ಮಧ್ಯೆ ಕಮಲೆಯ ಮ್ಲಾನವದನವೇ ಕಂಡಿತು. ದೇಸೂರು ಬಂದಾಗ ಒಳಗೆ ಬಂದು ಕುಳಿತು ಅಂದಿನ ದಿನಪತ್ರಿಕೆಯನ್ನು ಬಿಡಿಸಿದ. ಅಲ್ಲಿಯೂ ಅದೇ—ಕಮಲೆಯ ಮುಖ! ಕಣ್ಣು ಮುಚ್ಚಿಕೊಂಡು ಆತು ಕುಳಿತ. ಆಗಲೂ ಅವನು ಕಂಡದ್ದು ಅವಳನ್ನೇ.

ಒಂದು ದಂಪತ್ತು ಪಕ್ಕದ ಕೊಟಡಿಯಲ್ಲಿದೆ. ಅವರ ಮಗುವೊಂದು ನಕ್ಕು ಕೆಲೆದು ಆಟವಾಡುತ್ತಿದೆ. ಅದರೊಡನೆ ಅವರೂ ನಕ್ಕು ನಲಿಯುತ್ತಿದ್ದಾರೆ. ದಿನಕರನಲ್ಲಿ ಸುಪ್ತ ಆಸೆಯೊಂದು ಚಿಗುರಿತು. 'ತಮಗೂ ಅಂಥದೊಂದು ಮಗುವಾದರೆ ! ಕಮಲೆ ಒಬ್ಬಂಟಿಗಳಾಗಿ ಮನೆಯಲ್ಲಿರುವಾಗ ಅದೇ ಒಂದು ನೆರೆ ಆಗುವದಲ್ಲವೆ ? ತಮ್ಮ ಆಸೆ-ಆಕಾಂಕ್ಷೆಗಳಿಗೆ ಅದು ಹೂವಾಗಿ ಪರಿಮಳಿಸುವದಲ್ಲವೆ ?—ಅವ್ವ ನನ್ನ ಮದುವೆಯನ್ನು ಬಯಸಿದ್ದಳು; ನನ್ನಿಂದ ಮಗುವನ್ನೂ ಬಯಸಿದ್ದಳು. ತನ್ನ ದಿನದ ಹರಕೆಯಲ್ಲಿ ಅದನ್ನು ಅಂದು ತೋರುತ್ತಿದ್ದಳು. ಕಮಲೆ ತನ್ನ ಸೊಸೆಯಾಗಿ ಬರುವಾಗ

ಅವಳು ಇದ್ದಿದ್ದರೆ—! ಅವಳ ಕಷ್ಟಮಯ ಜೀವನ ಪಥದಲ್ಲಿ ಇದೊಂದು ತಂಗು ಮನೆಯಾಗಬಹುದಿತ್ತು. ತಿಳಿಗೊಳವಾಗಬಹುದಿತ್ತು. ನಾನು ಅವಳ ಜೀವಕ್ಕೆ ಅಂಥದೊಂದು ವಿರಾಮವನ್ನು ಕೊಡಲಾರದೆ ಹೋದೆನಲ್ಲ'— ಎಂದು ಚಿಂತಿಸುತ್ತಿದ್ದ.

ಲೋಂಡಾದ ಕಾನನದಲ್ಲಿ ಗಾಡಿ ಓಡುತ್ತಿತ್ತು. ದಿನಕರನ ಮನಸ್ಸೂ ಅರಣ್ಯವಾಗಿತ್ತು. ಸೊಕ್ಕಿನ ಹಸಿರು, ಎತ್ತರದ ಮರಗಳು, ಇಕ್ಕಟ್ಟಿನ ನೆಲ ಅವನ ಯಾವುದೋ ಗುರಿಗೆ ಅಡ್ಡವಾದಂತಿದ್ದವು. ಆದರೆ ಒಂದು ಆಸೆಯ ಕಿರಣ ಆ ಕಾನನದ ನಡುವಿನ ರೈಲುದಾರಿಯಂತೆ ಅವನಿಗೆ ದಾರಿಯಾಗಿ ಕಂಡು ಅದರೊಡನೆಯೇ ತನ್ನನ್ನು ಉರುಳಿಸಿಕೊಂಡು ಹೊರಟಿದ್ದ.

ಲೋಂಡಾದಲ್ಲಿ ಗಾಡಿ ನಿಂತಾಗ ಉಪಹಾರ ಮಾಡುತ್ತಿದ್ದ ಆ ದಂಪತಿಗಳು ಇವನನ್ನು ಕರೆದರು. ಅದು ಮರಾಠೀ ಜನ. ಪುಣೆಯ ಕಡೆಯವರಿರಬೇಕು. ದಿನಕರ "ಥ್ಯಾಂಕ್ಸ" ಎಂದು ಕೈಮುಗಿದು ಗಾಡಿಯಿಂದ ಇಳಿಯಹೊರಟ. ಅವರಲ್ಲಿಯ ತರುಣ 'ಯಾವ ಊರಿಗೆ ಹೊರಟಿದ್ದೀರಿ ?' ಎಂದು ಕೇಳುತ್ತ ಇವನನ್ನು ತಡೆದ. ಆ ತರುಣಿ 'ಬೆಳಗಾವಿ ಸ್ಟೇಶನ್ನಿಗೆ ಇವರನ್ನು ಕಳಿಸಬಂದವರು ಇವರ ಕುಟುಂಬ ಇರಬೇಕು.' ಎಂದು ಗಂಡನನ್ನೇ ಕೇಳಿದಳು.

ದಿನಕರ ತಪ್ಪಿಸಿಕೊಳ್ಳಲಾರದೆ ಅವರೊಡನೆ ಬೆರೆತು ಉಪಹಾರ ಮಾಡಿದ. ಅವರ ಮಗು 'ದಾ-ದಾ' ಎಂದು ಇವನ ಮೈ-ಮೈ ಅಡರಿತು. ದಿನಕರ ಎತ್ತಿಕೊಂಡು ಅದರ ಹೆಸರು ಕೇಳಿದ.'ಒಂದು ವರುಷದ ಮಗುವೇ?' ಎಂದು ವಿಚಾರಿಸಿದ.

ಉಪಹಾರ ಮುಗಿದಾಗ ಗಾಡಿಯೂ ಹೊರಟಿತು. ಈಗ ದಿನಕರ ತನ್ನ ಸ್ಥಳದಲ್ಲಿ ಸುಮ್ಮನೆ ಕುಳಿತುಕೊಂಡಿಲ್ಲ. ಆ ತರುಣನೊಡನೆ ಸದ್ಯದ ರಾಜಕೀಯವನ್ನೂ ಸಾಮಾಜಿಕ ರೀತಿ ನೀತಿಗಳನ್ನೂ ಮಹಾರಾಷ್ಟ್ರ-ಕರ್ನಾಟಕ ಸಂಬಂಧವನ್ನೂ ಚರ್ಚಿಸತೊಡಗಿದ್ದ. ಆ ತರುಣ ಎರಡೂ ಪ್ರಾಂತಗಳ ಪ್ರಾಂತೀಕರಣದ ವ್ಯವಹಾರ ಮಾರ್ಗವನ್ನೂ ಕುರಿತು ಮಾತಾಡಿದ. ದಿನಕರ ಭಾವನಾವಶನಾಗಿ ಮರಾಠಿ ಜನರ ಆಕ್ರಮಣಶೀಲತೆಯನ್ನು ಖಂಡಿಸಿದ. ಇವನು ಕೆರಳಿದಂತೆ ಕಂಡರೂ ಆ ಗಾಡಿ ಗೆಳೆಯ ನಗುನಗುತ್ತ 'ಅದು ಹಾಗಲ್ಲ, ಹೀಗಲ್ಲ–'

ಎಂದು ತನ್ನ ಮಾತನ್ನು ವಿವರಿಸುತ್ತ ಇವನ ವಾದದ ತೀವ್ರತೆಗೆ ನೀರು ಸುರುವು ತ್ತಿದ್ದ. ಆ ಗೆಳತಿ ತೊಡೆಯ ಮೇಲೆ ಮಗುವನ್ನು ಮಲಗಿಸಿಕೊಂಡು—'ಬೇಡ ಬಿಡಿರಿ;—ಯಾಕೆ ಈ ಚರ್ಚೆ' ಎನ್ನುತ್ತಿದ್ದಳು. ಅವಳ ಮುಖದಲ್ಲಿ ತಿರಸ್ಕಾರ ಬರೆದಂತೆ ದಿನಕರನಿಗೆನಿಸಿತು. ಮುಂಚಿನ ಅವಳ ನಗೆ-ಸ್ವಾಗತಗಳು ಈಗ ಕಾಣಲಿಲ್ಲ. ಅದಕ್ಕೆ ಅವಳ ತೀವ್ರ ಮಹಾರಾಷ್ಟ್ರಾಭಿಮಾನವೇ ಕಾರಣ ವಿರಬೇಕೆಂದುಕೊಂಡ. ಇಂಥ ಮಾತುಗಳ ಎಡೆಯಲ್ಲಿಯೂ ಅವಳು ತನ್ನ ಭಾವನೆಯನ್ನು ಪ್ರಕಟಿಸಲು ಸಮರ್ಥಳಾಗಿದ್ದಾಳೆ. ಕನ್ನಡ ಹುಡುಗಿಯರಾ ದರೆ ಹೀಗೆ ತಮ್ಮ ಪ್ರಾಂತದ ಬಗ್ಗೆ ಚಿಂತೆ ಮಾಡುತ್ತಾರೆಯೇ?—ಕಮಲೆ ಯಾಗಿದ್ದರೆ ಇಂಥ ಮಾತುಗಳಲ್ಲಿ ಭಾಗವಹಿಸುತ್ತಿದ್ದಳೇ?—ಎಂದೇನೇನೋ ಯೋಚಿಸುತ್ತಿದ್ದ. ಕಮಲೆಯನ್ನು ಅವಳೊಡನೆ ನೋಡಲಿಚ್ಛಿಸಿದನಾಗಲಿ ತನ್ನನ್ನು ಆ ತರುಣನೊಂದಿಗೆ ತೂಗಿ ನೋಡಲಿಲ್ಲ.

ಧಾರವಾಡ ಹತ್ತಿರವಾಗಿತ್ತು. ಇವನು ತನ್ನ ಸಾಮಾನು ನೋಡಿ ಹೊಂದಿಸಿಕೊಂಡ. ಅವರು ಹರಿಹರದವರೆಗೂ ಹೋಗುವವರೆಂದೂ ಅಲ್ಲಿಯ ಮೈಸೂರು ಕಿರ್ಲೋಸ್ಕರದಲ್ಲಿ ಇದ್ದಾರೆಂದೂ ತಿಳಿದು ಕನ್ನಡದಲ್ಲೇ ಮಾತಾಡ ಲಿಚ್ಛಿಸಿದ. ಅವರು ಸರಾಗವಾಗಿ ಕನ್ನಡದಲ್ಲಿ ಮಾತಾಡಿದರು. ಇದೆಲ್ಲ ಗಾಡಿಯ ಚರ್ಚೆ. ಮನಸ್ಸಿನಲ್ಲಿ ಹಿಡಿಯಬಾರದೆಂದು ಆ ತರುಣ ಕೇಳಿಕೊಂಡ. ತಾನು ದುಡುಕಿ ಆಡಿದ್ದರ ಬಗ್ಗೆ ದಿನಕರ ಕ್ಷಮೆಯನ್ನು ಕೋರಿದ.

ಧಾರವಾಡ ನಿಲ್ದಾಣ ಬಂದಾಗ, ಇಳಿಯುವಾಗ ದಿನಕರ ಆ ಮಗುವಿನ ಕೈಯಲ್ಲಿ ಒಂದು ರೂಪಾಯಿ ಇಡಹೋದ. ಆ ದಂಪತಿಗಳು ಅದಕ್ಕೆ ಅವ ಕಾಶ ಕೊಡಲಿಲ್ಲ. 'ನಿಮ್ಮ ಮನೆಯವರು ಬಂದ ಮೇಲೆ ತಿಳಿಸಿರಿ. ಒಮ್ಮೆ ಮನೆಗೇ ಬರುತ್ತೇವೆ'ಂದು ಆ ತರುಣ ನಕ್ಕ. ಹರಿಹರಕ್ಕೆ ಆ ತರುಣಿ ಆಮಂತ್ರಣವಿತ್ತಳು.

* * * *

ಮನೆಗೆ ಬಂದಾಗ ಒಂಬತ್ತು ಗಂಟೆಯಾಗಿ ಹೋಗಿದೆ. ಬಾಗಿಲು ತೆರೆದು ದೀಪವಂಟಿಸುವುದರಲ್ಲೇ ಪ್ರಭೆ ಹಾಜರಾದವಳು 'ಕಮಲಕ್ಕ' ಎಂದಳು. ಅವಳು ಬರಲಿಲ್ಲವೆಂದು ದಿನಕರ ಕಾರಣ ವಿವರಿಸಿದ. ಅವರು ಅಂದು ಬರು ತ್ತಾರೆಂದು ಕುಸುಮೆ-ಪ್ರಭೆ ಕಾಯ್ದುಕೊಂಡೇ ಇದ್ದರು. ಸೀತಾರಾಮ

ರಾಯರು ಕ್ಯಾಂಪ್ ಮೇಲೆ ಹೋಗಿದ್ದರು. ಕುಸುಮೆ ಬಂದು ದಿನಕರನನ್ನು ಊಟಕ್ಕೆ ಆಮಂತ್ರಿಸಿದಳು. ದಿನಕರ ಹಸಿವೆಯಿಲ್ಲವೆಂದರೆ—“ ಹೌದು; ಮಾವನ ಮನೆಯಿಂದ ಬಂದಿದ್ದೀರಿ. ಒಂದು ತುತ್ತು ಅನ್ನ ಉಂಡರೆ ನಿದ್ರೆ ಬರುತ್ತದೆ ” ಎಂದಳು.

“ ನಿದ್ರೆಯು ಭರವಸೆಕೊಟ್ಟರೆ ಬರುತ್ತೇನೆ”ನ್ನುತ್ತ ದಿನಕರ ನಗುತ್ತ ಎದ್ದ. “ ಮಾಮಾನ ನಿದ್ರೆಗೆ ಅನ್ನ ಕಮಲಕ್ಕನೇ ” ಎನ್ನುತ್ತ ಪ್ರಭೆ ಓಡಿದಳು.

* * * *

ಹಾಗೇ ಆಯಿತು. ಉಂಡುಬಂದ ದಿನಕರನಿಗೆ ನಿದ್ರೆಯೋ ಬರಲಿಲ್ಲ. ಕಮಲೆಯ ನೆನಪು ಅವನನ್ನು ಬೆಂಬಿಡದೆ ಕಾಡುತ್ತಿತ್ತು. ಬರೀ ಮನೆ; ಬರೀ ಹಾಸಿಗೆ. ಕೆಲವೇ ದಿನದಲ್ಲಿ ತಾನೆಷ್ಟು ದುರ್ಬಲನಾಗಿದ್ದೇನೆಂದು ದಿನಕರ ಯೋಚಿಸಿದ. ಆ ದುರ್ಬಲತೆಯಲ್ಲಿ, ನಿಸ್ಸಹಾಯತೆಯಲ್ಲಿ ಅವನಿಗೆ ಅಭಿಮಾನವೇ ಅನಿಸಿತು.

ಆದರೂ ಈಗವನ ಮನಸ್ಸು ಚಲ–ವಿಚಲವಾಗಿದೆ. ಪ್ರಭೆ ದಿನಾ ಇವನು ಕಚೇರಿಯಿಂದ ಬರುವಾಗ ಕಾಣಿಸಿಕೊಂಡು ‘ ಕಮಲಕ್ಕನ ಪತ್ರ ಬಂದಿತೇ ’ ಎಂದು ಕೇಳುತ್ತಾಳೆ. ಇವನು ಇಲ್ಲವೆಂದು ಕೈ ತಿರುವುತ್ತಾನೆ.

ದಿನಕರನೇ ಒಂದು ದೀರ್ಘ ಪತ್ರಬರೆದು, ತನ್ನ ಪ್ರವಾಸ–ಪ್ರಯಾಸಗಳನ್ನು ತಿಳಿಸುತ್ತ ‘ ಪ್ರಭೆ, ನಿನ್ನ ಪತ್ರ ಬಂತೇ ’ ಎಂದು ದಿನಾ ಕೇಳುತ್ತಾಳೆ ಎಂದು ತಿಳಿಸಿದ.

ಅದಕ್ಕೆ ಉತ್ತರ ಬಂದದ್ದು ಪ್ರಭೆಗೇ. ಒಂದು ದಿನ ದಿನಕರ ಆಫೀಸಿನಿಂದ ಬರುವಾಗ ಪ್ರಭೆ ‘ ಮಾಮಾ, ಕಮಲಕ್ಕನ ಪತ್ರ- ನನಗೆ ಬಂದಿದೆ–’ ಎಂದು ಕುಣಿಯುತ್ತ ಹೇಳಿದಳು. ‘ ಏನು ಬರೆದಿದ್ದಾಳೆ—ನೋಡೋಣ ’ ಎಂದ. ‘ ಹೂಂ—ನನಗೆ ಬರೆದಿದ್ದಾಳೆ. ನೀವು ಹೇಗೆ ನೋಡುತ್ತೀರಿ ?’ —ಎನ್ನುತ್ತ ಪ್ರಭೆ ತನಗೆ ಬಂದ ಪತ್ರ ತೋರಿಸಿದಳು.

ತನಗೆ ಬರೆಯಲಿಲ್ಲವಲ್ಲ—ಎಂದು ದಿನಕರ ಮನಸ್ಸಿನಲ್ಲೇ ಕೊರಗುತ್ತಿದ್ದವನು ಪ್ರಭೆಗೆ ಬಂದ ಪತ್ರನೋಡಿದಾಗ ಬರೀ ತನ್ನ ಯೋಗಕ್ಷೇಮದ ವಿಚಾರವೇ ಅದರಲ್ಲಿ ಇದ್ದುದನ್ನು ನೋಡಿ—‘ ಪ್ರಭೆಗೆ ಬರೆದರೂ ತನ್ನ ಸುದ್ದಿಯೇ ’ ಎಂದು ಒಂದು ಬಗೆಯ ಸಮಾಧಾನವನ್ನೂ ‘ ಅವಳಿಗೇಕೆ ಬರೆಯಬೇಕು—ನನ್ನ ಸುದ್ದಿ’—ಎಂಬ ಕುತೂಹಲವನ್ನೂ ತಾಳಿದ.

## ೧೧

ದಿನಕರ ಈಗ ಮನೆಯಲ್ಲಿ ಈಗ ಒಬ್ಬಂಟಿ. ಆಫೀಸಿನಿಂದ ಬರುವಾಗ ಬಂಗಲೆಯ ಗೇಟಿನಲ್ಲಿ ಪ್ರಭೆಯ ಮುಗುಳು ನಗೆಯ ಸ್ವಾಗತವೇನೋ ದೊರೆಯುತ್ತಿದೆ. ಆದರವಳು ಮೊದಲಿನಂತೆ ಈಗ ಮನೆಗೆ ಬರುತ್ತಲಿಲ್ಲ; ಹಾಗೇ ಕಂಡಾಗ ಒಂದೆರಡು ಮಾತುಗಳನ್ನು—ಅದೂ ಕಮಲೆಯನ್ನು ಕುರಿತು—ಆಡುವುದು ಮಾತ್ರ. ಇವನು ಬಾಗಿಲು ತೆರೆದು ಆರಾಮ ಖುರ್ಚಿಯಲ್ಲಿ ಬಿದ್ದುಕೊಳ್ಳುತ್ತಾನೆ. ಪ್ರಭೆ ಅಂಗಳದಲ್ಲಿ ಹೂಗಿಡಗಳ ನಡುವೆ ಏನೇನೋ ಮಾಡುವಂತೆ ನೋಡುತ್ತ—ತನ್ನ ಲಲಾಲಲಾ ಲಹರಿಯಲ್ಲಿ ಗುಣುಗುಡುತ್ತ ಎಡೆಯಾಡುತ್ತಿರುತ್ತಾಳೆ. ದಿನಕರನಿಗೆ ಅದನ್ನು ನೋಡುತ್ತ ಕೂಡುವದೂ ಒಂದು—ಅದೊಂದೇ ಕೆಲಸ. ಕಮಲೆಯೊಂದಿಗೆ ಅವಳನ್ನು ಹೋಲಿಸಿ ನೋಡುವುದು ಅವನ ಮನಸ್ಸಿನಲ್ಲಿ ನಡೆಯುವ ಗಡಿಯಾರ. ಟಿಕ್-ಟಿಕ್ ಎಂಬ ಎದೆಯ ತಾನದ ಹಿನ್ನೆಲೆಯಲ್ಲಿ, ತನಗೂ ತಿಳಿಯದಂತೆ, ತನ್ನ ಕರ್ಮಕ್ಕೆ ಮುಳ್ಳು ನರಿಯುವಂತೆ ದಿನಕರನ ಮನಸ್ಸು ಯಾವುದೋ ನಿಲುಗಡೆಗೆ ಧಾವಿಸುತ್ತಿರುತ್ತದೆ.

ದಿನಕರ ತನ್ನ ಒಂಟಿಗತನದಲ್ಲಿಯೂ ಇಸ್ಪೀಟು ಆಟದಿಂದ ನಿವೃತ್ತಿ ಹೊಂದಿದ್ದಾನೆ. ಹೊತ್ತು ಕಳೆಯಲು ಸುಲಭವಾದ ಸಾಧನವಾಗಿದ್ದ ಆ ಆಟದಲ್ಲಿ ಇಂದು ಅದೇಕೋ ಮನಸ್ಸು ನಿಲ್ಲುವುದಿಲ್ಲ. ಒಂದೆರಡು ದಿನ ಕ್ಲಬ್ಬಿಗೆ ಹೋಗಿ ನೋಡಿದ. ತನ್ನ ವಿಮನಸ್ಕತೆಗೆ ತಾನೇ ನಾಚಿ ಹೋಗುವದನ್ನು ನಿಲ್ಲಿಸಿದ. ಆಫೀಸಿನಿಂದ ಮನೆಗೆ ಬರುವಾಗ ತನಗೆ ತಿಳಯದೆಯೇ ಪ್ರಭೆಯನ್ನು ಚಿತ್ರಿಸಿಕೊಳ್ಳುತ್ತ, ಬಂಗಲೆಗೆ ಬಂದಾಗ ಎದುರಾಗುವ ಅವಳನ್ನು ಕಂಡು ತನ್ನ ಚಿತ್ರಕ್ಕೂ ವಾಸ್ತವ ಚಿತ್ರಕ್ಕೂ ಇರುವ ಅಂತರ ನೋಡಿ ತನ್ನ ಚಿತ್ರ ತಿದ್ದಿಕೊಳ್ಳುತ್ತ ಮನೆ ಸೇರುತ್ತಾನೆ. ನೆಪಕ್ಕೆಂಬಂತೆ 'ಪ್ರಭಾ, ನನ್ನನ್ನು ಯಾರಾದರೂ ಕೇಳಿಕೊಂಡು ಬಂದಿದ್ದರೇ?' ಎಂದು ಕೇಳುತ್ತಾನೆ. 'ಯಾರು ಬರುವವರಿದ್ದರು? ಕಮಲಕ್ಕನೇ'— ಎಂದವಳು ಕೇಳುತ್ತಾಳೆ. 'ನಿನಗೆ ತಿಳಿಸದೆ ಅವಳು ಬರುವದುಂಟೇ?' ಎನ್ನುತ್ತ 'ನನ್ನ ಗೆಳೆಯರೊಬ್ಬರು ಆರು ಗಂಟೆಗೆ ಬರುವದಾಗಿ ಹೇಳಿದ್ದರು. ಬಂದು ಹೋದರೇನೋ'—ಎನ್ನುತ್ತಾನೆ. ಪ್ರಭೆ

'ಈಗಿನ್ನೂ ಐದೂವರೆ' ಎಂದು ಎಚ್ಚರಿಸುತ್ತಾಳೆ. ಅವಳು ಮನೆಯಲ್ಲಿದ್ದರೆ ಗೇಟಿನಲ್ಲೇ ಇರುವ ವಾಡಿಕೆ. ಒಂದೊಂದು ದಿನ ಮ್ಯಾಟಿನಿಗೆ ಹೋಗಿದ್ದರೆ–ಅವಳನ್ನು ಕಾಣದ ದಿನಕರ ಮನೆಯಲ್ಲಿ ಕೂಡಲಾರದೆ ಗೇಟಿನಲ್ಲಿಯೇ ನಿಂತಿರುತ್ತಾನೆ. ಸಿನೆಮಾದಿಂದ ಅವಳು ನೇರವಾಗಿ ಮನೆಗೆ ಬರುವ ಸಮಯ ಎಣಿಸುತ್ತಿರುತ್ತಾನೆ; ಮತ್ತೆ ಅವಳು ಪೇಟೆಗೆ ಹೋಗಿ ಬರುವವಳಾದರೆ ಇವನಿಗೆ ಅಲ್ಲಿಯೇ ಎಡೆಯಾಟ.

ತನ್ನ ಮನಸ್ಸಿನಲ್ಲಿ ಸೇರಿದ ಈ ಭೂತವನ್ನು ಅವನು ಗುರುತಿಸದಿಲ್ಲ. ಒಂದು ದಿನ ಅದು ತಪ್ಪು ಕೆಲಸ ಎಂದುಕೊಂಡು ಆಫೀಸಿನಿಂದ ಮನೆಗೆ ಬರದೆ ಗೋಕುಲದಲ್ಲಿ ಉಪಹಾರ ತೀರಿಸಿ ಅತ್ತಿಕೊಳ್ಳಕ್ಕೆ ನಡೆದ.

ಎರಡು ದಿಬ್ಬಗಳ ನಡುವಿನ ಕೊರಕಲದಲ್ಲಿ ನಡೆಯುತ್ತ, ಪಾತಳಿ ನೆಲವನ್ನು ಹುಡುಕುತ್ತ ಹಸಿರು ಹಾಸಿದ ಒಂದು ಹುಲ್ಲುಗಾವಲಕ್ಕೆ ಬಂದ. ಅಂದು ಮಳೆ ಇದ್ದಿಲ್ಲ. ಸಂಜೆ ಬಂಗಾರಬೆಳಕು ಚೆಲ್ಲಿತ್ತು. ಮಗ್ಗುಲದ ಕೊಳ್ಳದಲ್ಲಿ ನೀರು ಜುಳುಜುಳು ಹರಿಯುತ್ತಿತ್ತು. ಎಡಬಲದಲ್ಲಿ ದಿಬ್ಬಗಳ ರಕ್ಷೆಯಿತ್ತು. ಹಿಂದೆ ಹುಬ್ಬಳ್ಳಿ ಲೋಕಲ್ ಒಂದು ನಾಗಿ ಹೋಯಿತು. ಒಂದೊಂದೇ ಡಬ್ಬಿಗಳು ಸೈನಿಕರ ಶಿಸ್ತಿನಿಂದ ಹೆಜ್ಜೆಹಾಕಿ ಓಡಿದಂತೆ ಕಂಡಿತು ದಿನಕರನಿಗೆ. ಪಕ್ಕಕ್ಕೆ ಚಾಚಿಕೊಂಡ ಕಿರಿ ಬಯಲು, ಅದಕ್ಕೆ ಹೊಂದಿಕೊಂಡಂತೆ ಏರಿಹೋದ ಇನ್ನೊಂದು ಹಸಿರು ದಿಬ್ಬ, ಮಧ್ಯೆ ತಾನು—ನಿಸರ್ಗ ದುಡಿಯಲ್ಲಿ ಭದ್ರವಾಗಿದ್ದಂತೆ ತಿಳಿದು ತಾಯ ಮಡಿಲಲ್ಲಿ ಮಗು ನಿಶ್ಚಿಂತವಾಗಿರುವಂತೆ ಅಲ್ಲೇ ನೆಲಕ್ಕೆ ಒರಗಿದ. ಎದುರು ಚೆಲ್ಲಿದ ರಮಣೀಯತೆಗಿಂತ ಇನ್ನೇನನ್ನೋ ಮನಸ್ಸು ಚಿಂತಿಸುತ್ತಿತ್ತು. ಈವರೆಗೆ ಏರಿಬರುವ ಆ ನೆನಪನ್ನು ಪರಿಸರದ ಕೃತ್ರಿಮ ನಿರ್ಮಾಣದಿಂದ ಅದುಮಿಕೊಂಡಿದ್ದ. ಇಂದು ಯಾವುದೂ ಅಡ್ಡಿಯಾಗಿಲ್ಲ. ಕಣ್ಣು ಮುಚ್ಚಿಕೊಂಡ. ಅವನ ಚಿಂತನೆ ತಂತಾನೆ ಸರಿಯುತ್ತಿತ್ತು.

* * * *

ದಿನಕರ ಚಿಂತಿಸುತ್ತಿದ್ದುದು ತನ್ನ ಹಿಂದಿನ ದಿನಗಳ ಒಂದು ಘಟನೆಯನ್ನು ಅವನು ಮ್ಯಾಟ್ರಿಕ್ ಪರೀಕ್ಷೆಗೆ ಓದುತ್ತಿದ್ದಾಗ ಬೆಳಗಾವಿಯಲ್ಲಿ ಠಳಕವಾಡಿಯ ಒಂದು ಬಂಗಲೆಯ ಹಿಂಬದಿಯ ಒಂದೇ ಕೋಣೆಯಲ್ಲಿ ತಾಯಿ-

ಮಗ ವಾಸವಾಗಿದ್ದರು. ತಾಯಿ ತೀರ ನಸುಕಿನಲ್ಲಿಯೇ ಇವನನ್ನು ಅಭ್ಯಾಸ ಕ್ಕೆಬ್ಬಿಸಿ, ತನ್ನ ಮನೆಕೆಲಸ ತೀರಿಸಿ ಮೈಸೂರಿನ ರಾವ್ ಅವರ ಮನೆಗೆ ಕೆಲ ನಕ್ಕೆ ಹೋಗುತ್ತಿದ್ದಳು.

ಪಾರ್ವತೀಬಾಯಿಯ ದೂರದ ಸಂಬಂಧಿ—ತಂಗಿ—ಒಮ್ಮೆ ಇವರ ಮನೆಗೆ ಬಂದು ಹೋದವಳು ತನ್ನ ಮಗಳಿಗೆ ಕಾಯಿಲೆಯೆಂದು ವೈದ್ಯರಿಗೆ ತೋರಿಸುವದಕ್ಕಾಗಿ ಮತ್ತೆ ಬಂದಳು. ಅಕ್ಕನ ಮನೆಯ ಯಥಾ-ತಥಾ ಸಂಸಾರ ಕಂಡು ಅಕ್ಕ ಇಲ್ಲದಾಗ ದಿನಕರನ ಕೈಯಿಂದ ಸಾಮಾನು ತರಿಸಿ ಹಾಕಿದಳು. ಸಾಮಾನು ನೋಡಿದ ಅಕ್ಕನೂ ಬದಲು ಆಡಲಿಲ್ಲ.

ಆ ಕಾಯಿಲೆಯ ಹುಡುಗಿ ಕೃಷ್ಣಾ. ಅವಳಿಗೇನು ಕಾಯಿಲೆಯೋ!— ಉಣ್ಣುತ್ತಿದ್ದಳು; ಉಡುತ್ತಿದ್ದಳು. ದಿನಕರನ ಕೂಡ ಹರಟುತ್ತಿದ್ದಳು. ಒಮ್ಮೊಮ್ಮೆ ಅವನನ್ನು ಶಾಲೆಯವರೆಗೆ ಕಳಿಸಹೋಗುವಳು; ಅವನು ಬರುವ ಸಮಯ ಅವನನ್ನು ಕರೆದುಕೊಂಡೂ ಬರುವಳು.

ದಿನಕರ ಅಪ್ರವ್ಯ ಕಂಡವನಲ್ಲ. ಕೃಷ್ಣೆಯ ತಾಯಿ ಭಾಗೀರಥಿ ದಿನಕರ ನನ್ನು ಕಂಡು ತನಗಿಲ್ಲದ ಗಂಡು ಸಂತಾನ ಅಕ್ಕನಿಗಿದೆ, ಎಂದು ಅವನನ್ನು ತುಂಬ ಪ್ರೀತಿಸುವಳು. ಅಕ್ಕ ವಿಮನಸ್ಕಳೇ. ತನ್ನ ಪತಿಯ ಕಾರಣದಿಂದ ಅವಳ ಮನಸ್ಸಿಗೆ ಆದ ಆಘಾತವನ್ನವಳು ತನ್ನ ಸ್ವಭಾವವೆಂಬಂತೆ ಅದುಮಿ ಕೊಂಡಿದ್ದವಳು. ಈಗ ಅವಳು ಜೀವನಕ್ಕೆಂದು ಮಾಡಿಕೊಂಡ ಒಂದೆರಡು ಮನೆಗಳ ಕೆಲಸ ಕಾರ್ಯಗಳಿವೆ. ತನ್ನ ಮನೆಯ ಕೆಲಸಕ್ಕೆ ಈಗ ತಂಗಿ ಬಿಡುವ ದಿಲ್ಲ. 'ಅಕ್ಕ, ಆ ಕೆಲಸಗಳನ್ನು ಬಿಟ್ಟುಬಿಡು' ಎಂದರೆ 'ಭಾಗೂ, ನೀನೆಷ್ಟು ದಿನ ಇಲ್ಲಿರುವವಳು ? ಮತ್ತೆ ನಾನು ಯಾರ ಮನೆ ಹುಡುಕಲಿ'—ಎನ್ನುವಳು. ಭಾಗೀರಥಿ ನಿರುತ್ತರಳಾಗುವಳು.

ಕೃಷ್ಣೆಯ ಮದುವೆಯಾಗಿತ್ತು. ಅವಳಿಗೆ ದಿನಕರನದೇ ವಯಸ್ಸು. ಆಕೆಯ ಗಂಡ ಯುದ್ಧಮುಖದಲ್ಲಿದ್ದವ. ಇನ್ನೂ ಭಾರತದ ಯಾವ ಯಾವುದೋ ಮೂಲೆಗಳನ್ನು ಸುತ್ತುತ್ತಿದ್ದಾನಂತೆ. ಮದುವೆಯಾದಂದ ಒಮ್ಮೆ ಬಂದು ಹೋಗಿದ್ದಾನೆ. ಮತ್ತೆ ರಜವೇ ಇಲ್ಲವೆಂದು ಬರೆಯುತ್ತಾನೆ. ಕೃಷ್ಣೆಗೆ ತಿಂಗಳು ತಿಂಗಳೂ ಐವತ್ತು ರೂಪಾಯಿ ಕಳಿಸುತ್ತಾನೆ.

ಬೆಳಗಾವಿಗೆ ಬಂದಮೇಲೆ ನಿಮಿತ್ತದ ಔಷಧಿಯಿಂದಲೇ ಕೃಷ್ಣೆಗೆ ಗುಣ ಕಂಡುಬಂತು. ಅವಳಿಗೆ ದೈಹಿಕ ಜಾಡ್ಯವೇನಿದ್ದಿಲ್ಲ. ಏನೋ ಭೂತ ಬಡಿದವ ರಂತೆ ವಿಮನಸ್ಕಳಾಗಿದ್ದವಳು—ರಾಹು ತುಡುಕಿದಂತಿದ್ದವಳು ಬೆಳಗಾವಿಗೆ ಬಂದು ಅಲ್ಲಿಯ ವಾತಾವರಣಕ್ಕೇ ಪೂರ್ಣ ಚಂದ್ರನಂತಾದಳು.

ಭಾಗೀರಥಿ 'ಊರಿಗೆ ಹೋಗೋಣವೇ' ಎಂದರೆ ಅವಳು 'ಅಲ್ಲೇನಿದೆ? ನಾನಿಲ್ಲೇ ಇರುತ್ತೇನೆ' ಎನ್ನುತ್ತಾಳೆ. ಒಮ್ಮೆ ಭಾಗೀರಥಿಯ ಗಂಡ ಬಂದ ವನು ಕೃಷ್ಣೆ ಅಲ್ಲೇ ಇರಲಿ—ಎಂದು ತನ್ನ ಹೆಂಡತಿಯನ್ನು ಕರೆದುಕೊಂಡು ಹೊರಟ.

ದಿನಕರನ ತಾಯಿ, 'ಭಾಗೂ, ನಿನ್ನ ಮಗಳನ್ನು ನನ್ನ ಮೇಲೆ ಬಿಟ್ಟು ಹೋದರೆ ಹೇಗೆ? ನಾನು ಕೆಲಸದವಳು. ದಿನಕರ ನಾಲೆಗೆ ಹೋಗುವವ' ಎಂದಳು. ಭಾಗೀರಥಿಯ ಗಂಡ ರಾಮಣ್ಣ ಹೇಳಿದ :

"ಅವಳು ಊರಲ್ಲಿ ಹೇಗೆ ಇದ್ದಳೆಂದು ನೀವು ನೋಡಿಲ್ಲ. ಅಲ್ಲಿ ಎಲ್ಲ ರಿಗೂ ಹಿಂಸೆ. ಇಲ್ಲಿ ಅವಳು ಹೀಗೆ ಇರುವದನ್ನು ನೋಡಿ ನನಗೇ ಆಶ್ಚರ್ಯ. ಮತ್ತೆ ಅವಳು ಅಲ್ಲಿ ಬಂದು ಭೂತವಾಗಿ ನಮ್ಮನ್ನು ಕಾಡಬೇಕೇ? ಇಲ್ಲಿ ನಿಮಗೆ ತೊಂದರೆ ಕೊಟ್ಟರೆ ಕಾಗದ ಬರೆಸಿರಿ. ಬಂದು ಕರೆದೊಯ್ಯುತ್ತೇನೆ."

"ಬೆಳೆದ ಮಗಳಪ್ಪಾ—ನಾನು ಕೆಲಸದವಳು."

"ಅವಳಿಗೆ ಎಲ್ಲಾ ಕೆಲಸ ಬರುತ್ತದೆ. ಮಾಡುತ್ತಲೂ ಇದ್ದಾಳಲ್ಲ."

"ಅವಳ ಕೆಲಸವಲ್ಲಪ್ಪಾ ನಾನು ಹೇಳಿದ್ದು—"

"ಒಂದು ತಿಂಗಳಿಗೆ ಆಕೆಯ ಗಂಡ ರಜದ ಮೇಲೆ ಬರುತ್ತಾನೆ. ಬಂದು ಕರಕೊಂಡು ಹೋಗುತ್ತೇನೆ."

ಎಂದು ಪಾರ್ವತೀಬಾಯಿಯ ಒಪ್ಪಿಗೆ ಪಡೆದು ಭಾಗೀರಥಿಯನ್ನು ರಾಮಣ್ಣ ಕರೆದುಕೊಂಡು ಹೋದ.

ಕೃಷ್ಣೆ ಚೆನ್ನಾಗಿಯೇ ಇದ್ದಾಳೆ. ದಿನಕರನನ್ನು ಎಡಬಿಡದೆ ಹಿಂಬಾಲಿ ಸುತ್ತಾಳೆ. ಅವನ ಅಭ್ಯಾಸವು ಈಗವಳ ಕಾಟದಿಂದ ಸಾಗುತ್ತಲಿಲ್ಲ. ಹಣ ವನ್ನೇ ಕಂಡರಿಯದ ದಿನಕರನಿಗೆ ಕೃಷ್ಣೆ ಚೆಲ್ಲುವ ರೊಕ್ಕದಿಂದ ಹೊಸ ಆಸೆ ಚಿಗುರುತ್ತಿದೆ.

ತನ್ನ ಪತಿ ಕಳಿಸುವ ಹಣಕ್ಕೆ ತಾನೇ ಬಾಧ್ಯಸ್ಥಳು. ಅದರ ವಿನಿಯೋಗದ ಅಧಿಕಾರ ತನ್ನದು. ತನ್ನ ತಂದೆ ತಾಯಿ ಆ ಹಣವನ್ನು ತಮ್ಮದಾಗಿ ಮಾಡಿಕೊಳ್ಳುತ್ತಾರಲ್ಲ—ಎಂದು ಅವಳು ಮೊದಲು ತಲೆಕೆಡಿಸಿಕೊಂಡದ್ದು. ನಂತರ ಇನ್ನೇನೇನೋ ಅವಳ ತಲೆಸೇರಿ, ತವರುಮನೆ ತಾಯಿ–ತಂದೆ ಎಂದರೆ ಆವಳಿಗೆ ಸೇರದಾಯಿತು.

ಈಗ ಬೆಳಗಾವಿಗೆ ಬಂದು ತನ್ನಲ್ಲಿದ್ದ ಹಣ ತೂರುತ್ತಿದ್ದಾಳೆ. ಅದೂ ಒಂದು ಹುಚ್ಚು. ಆ ಹಣದ ಬಗ್ಗೆ ಅಭಿಮಾನವೇ ಇಲ್ಲ. ಬಟ್ಟೆ-ಬರೆ ಕೊಂಡಳು. ದಿನಕರನಿಗೂ ಅಂಗಿ–ಚೆಣ್ಣವೆಂದಳು. ಸಿನೇಮಾಕ್ಕೆ ಅವನನ್ನು ಎಳೆದೊಯ್ದಳು. ಸ್ನೋ–ಪವುಡರು ಬಳಿದುಕೊಂಡು ಸಿಟಿಬಸ್ಸಿನಲ್ಲಿ ಊರೆಲ್ಲ ಸುತ್ತಿದಳು.

ಪಾರ್ವತೀಬಾಯಿಗೆ ಇದೆಲ್ಲ ರುಚಿಸದು. ಆದರವಳು ಕೃಷ್ಣೆಯ ಸೂಕ್ಷ್ಮ ಮನಸ್ಥಿತಿಯನ್ನು ನೆನೆದು ಎದುರಾಡುವದಿಲ್ಲ. ದಿನಕರನಿಗೆ 'ಇದು ಹುಚ್ಚು' ಎಂದು ಸೂಚಿಸಿದಳು. ತಾಯಿ ತನಗೇ ಅಂದಳೇನೋ ಎಂದು ಕೊಂಡನವ. ಆದರೆ ಕೃಷ್ಣೆಯೆದುರು ಅವನು ನಿರುಪಾಯ. ಅವನನ್ನು ಅವಳು ಕೊಂಡಂತೆ ವರ್ತಿಸುತ್ತಾಳೆ. ಕೂಡು ಎನ್ನುತ್ತಾಳೆ; ಏಳು ಎನ್ನುತ್ತಾಳೆ. ಅವನಿಗೆ ಏನೆಲ್ಲ ಮಾಡಿಕೊಡುತ್ತಾಳೆ. ಚಹವನ್ನೇ ಕುಡಿದು ತಿಳಿಯದ ದಿನಕರ ಈಗ ಕೃಷ್ಣೆಯ ಅಧಿಕಾರಕ್ಕೆ ಒಳಗಾಗಿ ದಿನಾ ಚಹಾ ಕುಡಿಯುತ್ತಾನೆ. ಬೆಳಗ್ಗೇ ಪಾರ್ವತೀಬಾಯಿಯ ಕೂಡ ಎದ್ದು ಕೃಷ್ಣೆ ಮೊದಲು ಚಹಾ ಮಾಡುತ್ತಾಳೆ. ಪಾರ್ವತೀಬಾಯಿಗೂ ಕುಡಿ ಎಂದರೆ 'ಇನ್ನು ಬದುಕುವ ನಾಲ್ಕೇ ದಿನಕ್ಕೆ ಈ ಹವ್ಯಾಸವೇಕೆ'—ಎಂದವಳು ನುಡಿಯುತ್ತಾಳೆ. 'ದಿನೂಗೆ ಅದರ ಅಭ್ಯಾಸವಿಲ್ಲ'ವೆಂದರೆ 'ನಾನು ಮಾಡಿಸುತ್ತೇನೆ'—ಎನ್ನುತ್ತಾಳೆ ಕೃಷ್ಣಾ. ಅವಳ ಈ ಒತ್ತಾಯದ ಮುಂದೆ ತಾಯಿ–ಮಗ ಎದುರಾಡುವದಿಲ್ಲ. ಆವರು ತೀರ ಲೆಕ್ಕದಿಂದ್ದವರು ಈಗ ಈ ಹುಡುಗಿಯಿಂದಾಗಿ ತಮ್ಮ ಲೆಕ್ಕವನ್ನು ಕಟ್ಟಿ ಇಡುವಂತಾಗಿದೆ. 'ಅವಳದು ಸುಖದ ಹುಚ್ಚು' ಎಂದು ಪಾರ್ವತೀಬಾಯಿ ಅನ್ನುತ್ತಾಳೆ. ಅವಳ ಪ್ರೀತಿಯ ದರ್ಪೋಕ್ತಿಯ ಮುಂದೆ ಇವಳಿಗೂ ಬದಲು ಹೇಳುವ ಧೈರ್ಯವಿಲ್ಲ.

ಪಾರ್ವತೀಬಾಯಿ ಬೆಳಗ್ಗೇ ಕೆಲಸಕ್ಕೆ ಹೋದಳೆಂದರೆ ಇತ್ತ ದಿನಕರನ ಅಭ್ಯಾಸ ನಡೆಯಬೇಕು. ಅದಕ್ಕೆ ಕೃಷ್ಣೆಯ ಕೃಪಾರಕ್ಷೆಬೇಕು. ಅವಳು

ಒಂದೊಂದುದಿನ ಏನೇನೋ ಕೆಲಸಮಾಡುತ್ತ ಇವನ ಗೊಡವೆಗೆ ಬರುವದಿಲ್ಲ. ಮತ್ತೊಮ್ಮೆ ಇವನ ಮುಂದೆ ಕುಳಿತು ಇವನ ಪುಸ್ತಕ ಕಸಿದು ಕಟ್ಟಿ ಇಡುತ್ತಾಳೆ. ಬೆಳಗ್ಗೆ ಈ ಕಾಟ ತಪ್ಪಿಸೋಣವೆಂದು ಅವನು ವಾಕಿಂಗ್ ಹೊರಟರೆ ಕೃಷ್ಣೆಯೂ ಹೊರಬಿದ್ದಳೇ.

ದಿನಕರ ತನಗೇ ತಿಳಿಯದಂತೆ ಕೃಷ್ಣೆಯ ಸೂತ್ರದ ಗೊಂಬೆಯಾಗಿದ್ದಾನೆ. ಅವಳದು ಬಲುಮೆಯ ಪ್ರೀತಿಯೆಂದವನಿಗೆ ಈಗ ಒಲುಮೆಯ ವಾಸನೆ ಬಡಿದಿದೆ. ತಾಯಿ ಏನೆನ್ನುವಳೋ ಎಂದು ಒಮ್ಮೊಮ್ಮೆ ಅಧೈರ್ಯ ಪಡುವ. ಆದರೆ ಕೃಷ್ಣೆಯ ನೇರವಾದ ವ್ಯವಹಾರ, ಅಂಜದೆ—ಅಳುಕದೆ ಇರುವ ಗಡಸುತನವನ್ನು ತಾನೇ ಅಪಾರ್ಥ ಮಾಡಿಕೊಂಡಿರುವೆನೇ ಎಂದು ಮತ್ತೊಮ್ಮೆ ಚಿಂತಿಸುತ್ತಾನೆ. ಏನಿದ್ದರೂ ಅವನು ನಿಸ್ಸಹಾಯ, ಕೃಷ್ಣೆಯ ಮುಂದೆ.

ಒಂದು ದಿನ 'ಡಾಲ್ಸ ಹೌಸ್' ಚಿತ್ರ ಬಂದುದನ್ನು ಅವನು ತಾಯಿಗೆ ಹೇಳಿ, 'ಗೆಳೆಯರೆಲ್ಲ ನೋಡಿ ಬಂದಿದ್ದಾರೆ—ಚೆನ್ನಾಗಿದೆಯಂತೆ. ನಮ್ಮ ಪರೀಕ್ಷೆಗೆ ಇರುವ ಪುಸ್ತಕದ್ದೇ ಕಥೆ. ಅಭ್ಯಾಸಕ್ಕೂ ಅನುಕೂಲ'—ಎಂದ. ಅಭ್ಯಾಸಕ್ಕೆ ಅನುಕೂಲವೆಂದ ಇವನ ಸಲಹೆಯನ್ನು ಪಾರ್ವತೀಬಾಯಿ ಎಂದೂ ಪ್ರಶ್ನಿಸದೆ ಇವನಿಗೆ ಎಡೆಮಾಡಿಕೊಡುತ್ತಾಳೆ. ಅದವಳ ದೌರ್ಬಲ್ಯವೆಂದು—ಅದೇ ತನ್ನ ಬಲವೆಂದು—ಚಿಲ್ಲರೆ ಸಂದರ್ಭಗಳಲ್ಲಿ ಒಮ್ಮೊಮ್ಮೆ ದಿನಕರ ಕಂಡಿದ್ದಾನೆ. ಇಂದೂ ಹಾಗೇ ಆಯಿತು.

ಎರಡನೆಯ ಆಟ ರಾತ್ರಿ ಒಂಬತ್ತಕ್ಕೆ ದಿನಕರ ಹೊರಟ. ಕೃಷ್ಣೆಗೆ ಅವನು ಹೇಳಿದ್ದಿಲ್ಲ. ಪಾರ್ವತೀಬಾಯಿ ಹೇಳಿದಳು : ಅವನ ಪರೀಕ್ಷೆಯದು ಯಾವುದೋ ಸಿನೀಮವಂತೆ—ಅವನು ಹೋಗಿಬರಲಿ—ಎಂದು. ನಾನೂ ಹೋಗುತ್ತೇನೆಂದಳು ಕೃಷ್ಣಾ. 'ಅದು ಇಂಗ್ಲೀಷಂತೆ; ರಾತ್ರಿ ನೀನೇಕೆ ಹೋಗಬೇಕು?' ಎಂದಳು ಪಾರ್ವತೀಬಾಯಿ. 'ಏನಾಗುತ್ತದೆ' ಎಂದು ಕೃಷ್ಣೆ ಪ್ರಶ್ನಿಸಿದಳು. 'ಪರೀಕ್ಷೆಯದಂತೆ.' ಎಂದರೆ 'ಇತರರು ನೋಡಕೂಡದೇ' ಎಂದವಳ ಮರು ಪ್ರಶ್ನೆ. 'ನೋಡಬಾರದೆಂದೇನಿಲ್ಲ'— ಎಂದು ದಿನಕರ ಹೇಳಬೇಕಾಯಿತು. ಕೃಷ್ಣೆ ಹೊರಟೇಬಿಟ್ಟಳು.

ಅದು ದಿನಕರನ ಪರೀಕ್ಷೆಯ ಚಿತ್ರವೇ ಆಯಿತು. ಅವನ ಸುಪ್ತ ಆಕಾಂಕ್ಷೆ ಕೃಷ್ಣೆಯೊಡನೆ ಅಂದಿನ ಸಲುಗೆಗೆ ಜಾಗ್ರತವಾಯಿತು. ಅರ್ಧ

ಸಿನೇಮಾ ನೋಡಿದ ನಂತರ ಕೃಷ್ಣೆ ದಿನಕರ ನೋಡಿದ್ದು ತಮ್ಮ ತಮ್ಮನ್ನೇ.

ಕೃಷ್ಣೆಯು ಸಲಿಗೆ ವಿಪರೀತಕ್ಕಿಟ್ಟುದನ್ನು ಪಾರ್ವತೀಬಾಯಿ ನೋಡದಿರಲಿಲ್ಲ. ದಿನಕರನಿಗೆ ಏನು ಹೇಗೆ ಹೇಳಬೇಕೆಂದೇ ತಿಳಿಯದು. 'ನಿನ್ನ ತಂದೆಯು ಬಿರುದು ಎಬ್ಬಿಸಬೇಡ'—ಎಂದು ಒಂದೇ ಮಾತು ಹೇಳಿದಳು. ದಿನಕರ ತಂದೆಯ ಬಿರುದು ಇಂಥದೇ ಎಂದಾಗ ಬಹಳ ಇಳಿದುಹೋದ. ಆದರವನು ಕೃಷ್ಣೆಯ ಕೈಗೊಂಬೆಯಾಗಿದ್ದಾನೆ. ತಾಯಿಗೆ ತನ್ನ ನಿಸ್ಸಹಾಯತೆ ಹೇಗೆ ಸೂಚಿಸಿಯಾನು? ಸೂಚಿಸಿದರೂ ಅವಳೇನು ಮಾಡಬೇಕು? ತಿಳಿದೂ ತಿಳಿದೂ ತಾನು ಕೃಷ್ಣೆಯಲ್ಲಿ ಅನುರುಕ್ತನಾಗಿದ್ದಾನೆ. ತನ್ನದು ತಪ್ಪು; ನಿಜ. ಅದು ಒತ್ತಾಯದಿಂದ ಬಂದದ್ದೆಂದು ತಾಯಿಗೆ ಅವನು ಒಡೆದು ಹೇಳಬೇಕೇ? ಒಂದು ದಿನ ತಾಯಿಯ ಕಾಲಮೇಲೆ ಬಿದ್ದು ಅತ್ತುಬಿಟ್ಟ.

ಪಾರ್ವತೀಬಾಯಿಗೆ ಬಾಳಿನಲ್ಲಿ ಉಳಿದದ್ದೊಂದು ಆಸೆ ಎಂದರೆ ದಿನಕರ. ಅದೂ ತನ್ನ ಕೈಬಿಟ್ಟರೆ ಹೇಗೆ ಎಂದು ಚಿಂತೆಯಾಯಿತು. ರಾಮಣ್ಣನಿಗೆ ಕಾಗದ ಬರೆಸಬೇಕು; ಅದೂ ಮಗನಿಂದಲೇ. ಅವಳಿಗೆ ಬರಹ ಬರದು. ಕೃಷ್ಣೆಗೆ 'ಊರಿಗೆ ಹೋಗುತ್ತೀಯಾ' ಎಂದು ಕೇಳಿದರೆ 'ಯಾಕೆ? ಬೇಸರವಾದೆನೇ' ಎನ್ನುತ್ತಾಳೆ. ಮಗನಿಗೇ ಹೇಳಿ ಬರೆಸಿದಳು. ಏನೇ ಇರಲಿ; ಬಂದು ಕರೆದುಕೊಂಡು ಹೋಗಬೇಕೆಂದು ಬರೆಯಹೇಳಿದಳು. ತಾಯಿಯ ಮುಂದೆ ತನ್ನ ಹೊಣೆಯನ್ನರಿತಂತಾದ ದಿನಕರ ಅವರು ಹೇಳಿದಂತೆಯೇ ಬರೆದ.

ರಾಮಣ್ಣ ಕೂಡಲೇ ಬರಲಿಲ್ಲ. ಕೃಷ್ಣೆ ಏನೇ ಆಗಲಿ, ತನ್ನ ಮನೆಯಲ್ಲಿ ಬೇಡವೆಂದವನ ಆಸೆ. 'ಆಕೆಯ ಗಂಡ ಬರುವವನಿದ್ದಾನೆ. ನಾಲ್ಕು ದಿನದಲ್ಲಿ ಬರುತ್ತೇನೆ' ಎಂದು ಉತ್ತರ ಬಂತು.

ಅವರ 'ನಾಲ್ಕು ದಿನ' ಆಗುವಾಗ ದಿನಕರನಿಗೆ ಮಧ್ಯವಾರ್ಷಿಕ ಪರೀಕ್ಷೆ ಕಾದಿತ್ತು. ಅವನಿಗೆ ಓದಿದ್ದು ಯಾವುದೂ ಈಗ ಮನಸ್ಸಿಗೆ ಹತ್ತುವದಿಲ್ಲ.

ಒಂದು ದಿನ ಇದ್ದಕಿದ್ದಂತೆ ರಾಮಣ್ಣ ಒಬ್ಬ ಮಿಲಿಟರೀ ಸಾಹೇಬನೊಂದಿಗೆ ಜೀಪಿನಲ್ಲಿ ಇವರ ಮನೆಯ ಮುಂದೆ ಬಂದರು. ದಿನಕರ ಶಾಲೆಗೆ ಹೋಗಿದ್ದ. ಅವನು ಬರುವಷ್ಟರಲ್ಲಿ ಕೃಷ್ಣಾ ಹೋಗಿಬಿಟ್ಟಿದ್ದಳು.

ಆ ಸಾಹೇಬನೇ ಕೃಷ್ಣೆಯ ಗಂಡ. ಬಂದವ ರಾವಣನಂತೆ ಎತ್ತಿಕೊಂಡು ಹೋಗಿಬಿಟ್ಟಿದ್ದ. ಮನೆ, ಇದ್ದವರು ಯಾರು—ಏನೊಂದನ್ನೂ ಅವನು ವಿಚಾರಿಸಲಿಲ್ಲ. ಯಾವುದಕ್ಕೂ ಅವನು ಕಾಯಲಿಲ್ಲ.

ಆದರೆ ಕೃಷ್ಣೆ ಅವನಿಗೆ ಸೀತೆಯಲ್ಲ. ಕೃಷ್ಣೆಗೆ ಅವನು ರಾವಣನಾದದ್ದು ಮಾತ್ರ ನಿಜ—ಎಂದು ದಿನಕರ ತಾನು ರಾಮನೆಂಬ ಮಬ್ಬಿನಲ್ಲಿ ಅಂದುಕೊಂಡ.

ರಾಮಣ್ಣ ಪಾರ್ವತೀಬಾಯಿಯ ಮುಂದೆ 'ಒಂದೇಸವನೆ ತಾರುಮಾಡಿ, ಬೆಳಗಾವಿ ಸಾಹೇಬರ ಮುಖಾಂತರ ಬರೆಸಿ ಅವನಿಗೆ ನೋಟೀಸು ಕೊಡಿಸಿ ಕರೆಸಬೇಕಾಯಿತೆ'ಂದು ಹೇಳಿದ.

"ಭಾಗೂ ಏಕೆ ಬರಲಿಲ್ಲ ?" ಎಂದಳು ಪಾರ್ವತೀಬಾಯಿ.

"ಅವಳು ಕೃಷ್ಣೆಗಾಗಿ ಎಲ್ಲಾ ದೇವರ ಹರಕೆ ಹೊತ್ತಳು. ನಿಮ್ಮಲ್ಲಿ ಅವಳನ್ನು ಬಿಟ್ಟು ಹೋದಮೇಲೆ ಸ್ವಲ್ಪ ಹಗುರಾಗಿದ್ದಳು. ದಿನಕರನ ಪತ್ರ ಬಂದಂದಿನಿಂದ ನೆಲವನ್ನೇ ಹಿಡಿದುಬಿಟ್ಟಿದ್ದಾಳೆ. ಆಗ ಇಲ್ಲಿ ಬರಬೇಕೆಂದು ಪರದಾಡಿದಳು. 'ನೀನು ಹೋಗಿ ಏನು ಮಾಡುವವಳು ? ಅವರೂ ಹೊರಗಿನವರಲ್ಲ. ನಿಮ್ಮ ಅಕ್ಕ' ಎಂದು ನಾನೇ ತಡೆದೆ. 'ಯಾವ ಸುಖದಲ್ಲಿ ಅಕ್ಕನಿಗೆ ಪಾಲು ಕೊಟ್ಟಂತಾಯಿತಲ್ಲ'—ಎಂದಳು.

"ಅಳಿಯ ಹೀಗೇ ಬಿರ್ರನೆ ಬಂದಾಗ ಅವನನ್ನು ನೋಡಿ 'ಅಯ್ಯೋ' ಎಂದು ಚೀರಿ ನೆಲಕ್ಕೆ ಬಿದ್ದವಳು ನಾವು ಬರುವಾಗ ಇನ್ನೂ ಮೇಲಕ್ಕೆದ್ದಿದ್ದಿಲ್ಲ. ನಿಮ್ಮನ್ನು ಕೃಷ್ಣೆಯ ಸೆರೆಯಿಂದ ಬಿಡಿಸಲು ನಾನು ಧಾವಿಸಿ ಬಂದೆ. ನಿಮಗೆ ಸುಖದಲ್ಲಿ ನಾವು ಪಾಲು ಕೊಡಲಿಲ್ಲ. ಕೃಷ್ಣೆಯಿಂದ ನಿಮಗೇನಾಗಿರಬಹುದು—ನೀವು ಹೇಳುವದೇ ಬೇಡ ನಾವೂ ನಿರುಪಾಯರಾಗಿದ್ದೆವು. ನಿಮ್ಮ ತಂಗಿಯನ್ನು ನೋಡಿಕೊಳ್ಳಬೇಕು. ನಾನು ಬರುತ್ತೇನೆ." ಎಂದು ರಾಮಣ್ಣ ಹೊರಡಲನುವಾದ.

ರಾಮಣ್ಣ 'ಬರುತ್ತೇನೆ' ಎನ್ನುತ್ತ ಪಾರ್ವತೀಬಾಯಿಗೆ ಬಾಗಿ ನಮಸ್ಕರಿಸುವಾಗ ಅವಳ ಕಣ್ಣೀರ ಹನಿಯೊಂದು ಅವನ ಕೈಮೇಲೆ ಬಿತ್ತು.

ದಿನಕರ ಅಲ್ಲೇ ನಿಂತಿದ್ದ. ರಾಮಣ್ಣ ಅವನ ಭುಜ ಚಪ್ಪರಿಸಿ ಹೊರಟರು. ಅವು ತನ್ನ ತಪ್ಪಿಗೆ ಕ್ಷಮೆಯೆಂದು ಒಮ್ಮೆ ದಿನಕರ ತಿಳಿದರೆ ಒಳಗಿನ ಅವಿವೇಕ ' ಶಹಬಾಸ್‌ಗಿರಿ ' ಎಂದು ಪಿಸುನುಡಿಯಿತು.

*　　　*　　　*　　　*

ಕಣ್ಣು ಮುಚ್ಚಿಕೊಂಡು ಬಿದ್ದಲ್ಲಿಯೇ ಐದಾರು ವರುಷಗಳ ಹಿಂದಿನ ಕಥೆಯನ್ನು ಕಾಣುತ್ತಿದ್ದ ದಿನಕರ " ಕೃಷ್ಣಾ–ಕೃಷ್ಣಾ " ಎಂದು ಕನವರಿಸಿದ.

ಸುತ್ತಾಡಲು ಬಂದ ಇಬ್ಬರು ಗೆಳೆಯರು ಇವನ ಹತ್ತಿರ ಸರಿದು ಹೋಗುವಾಗ ಒಬ್ಬ ಬಾಗಿನೋಡಿ " ಡಿ. ಎಸ್. ದೇಶಪಾಂಡೆ; ೧೦೦/೧೦, ೫, ೨೦/೨೫೦ " ಎಂದು ಕೂಗಿಕೊಂಡ.

ದಿನಕರನ ಆಫೀಸಿನ ಕಾರಕೂನ ಕುಲಕರ್ಣಿಯಾತ. ಯಾರನ್ನೇ ಕುರಿತು ಮಾತಾಡಲಿ, ಅವರ ಸಂಬಳದ ಗ್ರೇಡು ಹಿಡಿದು ಕೂಗುವದು ಅವನ ಸ್ವಭಾವ.

" ಯಾಕ್ರೀ ದೇಶಪಾಂಡೆ, ರಾಮಾ–ಕೃಷ್ಣಾ ಎನ್ನುತ್ತೀರಿ ? " ಕುಲಕರ್ಣಿಯ ಜತೆಗಿದ್ದ ಗೆಳೆಯ ಪಾಟೀಲನೆಂದ.

ದಿನಕರ ಕಣ್ಣು ತೆರೆದು ಇಹಲೋಕಕ್ಕೆ ಅವತರಿಸಿದಂತೆ ಅವರನ್ನು ನೋಡಿ ಗುರುತಿಸಿ—" ಹೋ, ಪಾಟೀಲ ಕುಲಕರ್ಣಿ ಕೂಡಿಬಿಟ್ಟಿದ್ದಾರೆ ! ವಾಕಿಂಗು ಬಂದಿದ್ದಿರೇನು ? "

" ಮತ್ತೇನು ಮಾಡೋಣ ? ನೀವು ಕ್ಲಬ್ ಬಿಟ್ಟುಬಿಟ್ಟಿರಿ. ನಾವೂ ಕೈ ಕಾಸು ಕಳೆದುಕೊಂಡೆವು. ತಿಂಗಳ ಕೊನೆ. ಖಾಲೀ ಸುತ್ತಾಟವೇ ಗತಿ ಈಗ. "

" ಮನೆಯವರನ್ನು ಊರಿಗೆ ಕಳಿಸಿದಾಗಾದರೂ ದೇವರ ನೆನಪಾಗುತ್ತದೆ ನಿಮಗೆ, ರಾಯರೇ. ನಮಗೆ ಊರಿಗೆ ಕಳಿಸೋಣವೆಂದರಾದರೂ ಯಾರಿದ್ದಾರೆ ? ೫೫/೫, ೨/೮೦ರವರು ನಾವು. "

ದಿನಕರ ಸುಮ್ಮನೆ ನಕ್ಕ. ಅವರು ನಿಂತೇ ಇದ್ದರು.

" ಏಳಿರಿ ದೇಶಪಾಂಡೆ, ಸ್ಟೇಶನ್ನದಲ್ಲಿ ಒಂದು ಗ್ಯಾಲನ್ನ ಚಹಾ ಹಾಕಿಕೊಂಡು ಮೋಟರ ಮನೆಗೆ ಬಿಡೋಣ. ಹೊತ್ತೂ ಆಯಿತಲ್ಲ " ಎಂದ ಪಾಟೀಲ. ದಿನಕರನೂ ಎದ್ದ.

## ೧೨

ದಿನಕರನಿಗೆ ಅತ್ತಿಕೊಳ್ಳ ಈಗ ನಿತ್ಯ ಯಾತ್ರಾಸ್ಥಳವಾಗಿದೆ. ಆಫೀಸಿನಿಂದ ನೇರವಾಗಿ ಅವಸರವಸರವಾಗಿ ಅಲ್ಲಿಗೆ ಧಾವಿಸುತ್ತಾನೆ. ದಾರಿಯಲ್ಲಿ ಯಾರಾದರೂ ನಿಂತು ಮಾತು ಬೆಳಸಿದರೆ ಏನೋ ಕಳೆದುಕೊಂಡಂತೆ ವಿವಶನಾಗುತ್ತಾನೆ. ಗಡಿಯಾರ ನೋಡಿಕೊಂಡು ಎಂಗೇಜಮೆಂಟ ಇದ್ದವರಂತೆ ಕ್ಷಮೆ ಕೋರಿ ಹೊರಟುಬಿಡುತ್ತಾನೆ. ಸ್ಟೇಶನ್ನಿನ ಅಂಗಡಿಯಲ್ಲೇ ಭಯ್ಯಾ ಕೊಟ್ಟ ಬೆಲ್ಲದ ಪಾನಕವನ್ನೇ ಚಹವೆಂದು ಕುಡಿಯುತ್ತಾನೆ. ತನ್ನ ಮೆಚ್ಚಿನ ಗೋಕುಲನಿವಾಸಕ್ಕೆ ಹೋಗಲು ಅವನಿಗೆ ಸಮಯವೇ ಇಲ್ಲ.

ರೈಲುಕಂಬಿ ದಾಟಿ ತಗ್ಗು-ತೆವರುಗಳಲ್ಲಿ ಏಳುತ್ತ ಬೀಳುತ್ತ ಅಂದು ಕೃಷ್ಣೆಯನ್ನು ಚಿತ್ರಿಸಿಕೊಂಡ ಸ್ಥಳಕ್ಕೆ ಬಂದು ಬಿದ್ದುಕೊಳ್ಳುತ್ತಾನೆ. ತನ್ನ ಮನಸ್ಸಿನ ಕುದುರೆಯನ್ನು ಐದಾರು ವರ್ಷಗಳ ಹಿಂದಿನ ನೆನಪಿಗೆ ಓಡಿಸಿಕೊಂಡು ಹೋಗಿ ಅದೇ ಆ ಬಿಚ್ಚು ಬೀನಾದ ಕೃಷ್ಣೆಯನ್ನು ಕಂಡುಕೊಳ್ಳುತ್ತಾನೆ.

ಆವಳಿಗೆ ಇವನದೇ ವಯಸ್ಸು ಎನ್ನಲಿಲ್ಲವೇ ? ಹೌದು; ಆಗ ಅವಳು ಇಪ್ಪತ್ತರ ತರುಣಿ. ತಾನು ಅದುಮಿದ ತಾರುಣ್ಯ ಪ್ರವೇಶದ ಪ್ರಸವ ವೇದನೆಯನ್ನು ಅನುಭವಿಸುತ್ತಿದ್ದರೆ, ಅವಳದು—ಹೆಣ್ಣು ಎಂಬ ಕಾರಣದಿಂದ ಬೆಳೆದ-ಕೂಸಿನ ಅಳು-ನಗುಗಳ ಆಟದ ರಂಗ. ಅವಳ ಆಸೆ-ಬಯಕೆಗಳು ದಿನಕರನಿಗೆ ಆದರ್ಶವಾಗಿ ತಾನೂ ಅವುಗಳನ್ನು ಅನುಸರಿಸಲೆತ್ನಿಸುತ್ತಾನೆ. ತಾರುಣ್ಯದ ಹಸಿವು—ಕಾಮನೆಗಳು ನಿಸರ್ಗದ ಪಾಠವಾಗಿಯೇ ಅವನಲ್ಲಿ ಜಾಗ್ರತಗೊಂಡು ಕೂಸು ತನ್ನ ಹಸಿವಿಗೆ ತಾಯನ್ನು ಹರಿದು ತಿನ್ನುವಂತೆ, ಕಾಡುವ ಮನಸ್ಸಿನ ಪಿಪಾಸೆಯನ್ನು ಕೃಷ್ಣೆಯಲ್ಲಿ ತಣಿಸಿಕೊಳ್ಳುತ್ತಾನೆ. ಅದು ಹಿಂಗಲಾರದ ನೀರಡಿಕೆ; ಮದಿರೆಯಂತೆ ಕುಡಿದಷ್ಟೂ ಬಾಯಾರಿಸುವ ದಾಹ. ಅವನು ಅದರ ತಿರುಗಣಿಯಲ್ಲೇ ಮಾಂತ್ರಿಕನಿಗೊಲಿದ ಭೂತದಂತೆ ಮತ್ತೆ ಮತ್ತೆ ಅದೇ ರೂಪದ ಅದೇ ಆಕೃತಿಯ ಎಡೆ ಎಡೆಗೆ ನುಗ್ಗುವ ಚಪಲವನ್ನು ಸಾಮಾಜಿಕ ಭಯ—ವಿಹ್ವಲತೆಗಳಿಗೆ ಎದುರಾಗಿ, ತಾಯಿಯ ಕೈಂಕರ್ಯಕ್ಕೆ ಮರೆಯಾಗಿ ತೀರಿಸಿಕೊಳ್ಳುತ್ತಿದ್ದಾನೆ.

ತನ್ನದು ಪ್ರಯೋಗ ಪಾಂಡಿತ್ಯವಾದರೆ, ಕೃಷ್ಣೆಯದು ನಿಶ್ಚಲವಾದ, ನಿರಾತಂಕವಾದ, ನೇರವಾದ ವ್ಯವಹಾರ. ಇವನಲ್ಲಿ ಅವಳಿಗೆ ಯಾವ ಭಯವೂ ಇಲ್ಲ. ಪರಿಸರಕ್ಕೆ ಸ್ತ್ರೀಸಹಜವಾದ ಒಂದು ಸಂಕೋಚ ಕಾಡುವದಾಗಲಿ ಹೆಚ್ಚಿನ ಯುಕ್ತಿ-ಪ್ರಯುಕ್ತಿಗಳನ್ನೇನವಳು ಆರಾಧಿಸಬೇಕಿಲ್ಲ. ಅವಳಿಗೆ ದಿನ ಕರಸ ಮನೆಯಲ್ಲಿ ಯಾವ ಅಡ್ಡಿ–ಆತಂಕಗಳೂ ಇಲ್ಲ. ಪಾರ್ವತೀಬಾಯಿಯ ಕರ್ತವ್ಯದಕ್ಷತೆಯೇ ಇಬ್ಬರಿಗೂ ಆಟದ ಬಯಲಾಯಿತು.

ಕೃಷ್ಣೆಯದು ಕೃಷ್ಣವರ್ಣವೇ. ಹಳ್ಳಿಯಲ್ಲಿ ಬೆಳೆದ ಅವಳ ದೇಹ–ಮನಸ್ಸುಗಳಿಗೆ ವಯಸ್ಸಿಗೆ ತಕ್ಕ ಸ್ವಯಂ ಸಂಸ್ಕಾರ ಬಲ ಬಂದಿದೆ. ಅವಳಲ್ಲಿ ದಿನಕರ ಮೆಚ್ಚುವ ಗುಣವಿಶೇಷಣಗಳು, ಆಕರ್ಷಣೆಗಳಿಗೆ ಯಾವ ಕೊರತೆಯೂ ಇಲ್ಲ. ದಿನಕರ ಅವಳಿಗೆ ಅಷ್ಟೇ ಆಕರ್ಷಕವಾಗಿ ಕಂಡಿರಬೇಕು. ಎಂತಲೇ ತಡೆದ ನೀರಿನಂತೆ ಕಟ್ಟೊಡೆದು ಅವಳು ಇವನ ಮೇಲೆ ಧುಮುಕಿದಳು.

ಅವಳ ನಲಿಗೆ–ಸಲ್ಲಾಪಗಳು, ಕೆಲಸ–ಕಾರ್ಯಗಳು ಗಂಡಿನ ಸೇವೆಯೆಂಬ ಯಾವ ಕೃತ್ರಿಮತೆಯನ್ನೂ ಪ್ರದರ್ಶಿಸುತ್ತಿಲ್ಲ. ಸ್ನೇಹಕ್ಕೆ ಪ್ರತಿಸ್ನೇಹವೆಂಬ ನಿಸ್ಸಂಕೋಚ ಸಂಗಕ್ಕೆಳಸಿದ ಅವಳನ್ನು 'ಗಂಡುರಾಮಿ' ಎಂದು ಕರೆಯಲು ಅಲ್ಲಾರೂ ಇಲ್ಲ. ದಿನಕರ ಅವಳ ಮುಂದೆ ನಿಂತು ಅವಳದೇ ಮನೋಭಾವ ತಾಳಲು ಯತ್ನಿಸುವ. ಆದರವನ ಸಂಸ್ಕಾರ, ಪರಿಸರದ ಪ್ರಭಾವದಿಂದ ಸಂಕೋಚಮಯವಾಗಿದೆ. ಕೃಷ್ಣೆಯ ಆಸೆಗೆ ತನ್ನನ್ನು ಒಡ್ಡಿಕೊಂಡು ನಿಂತ ಹೆಣ್ಣಿನ ಸೇವಾಭಾವ ಅವನದಾಗಿದೆ.

ಹುಚ್ಚಿಯಾಗಿ ಬಂದ ಕೃಷ್ಣೆ ಬೆಳಗಾವಿಯಲ್ಲಿ ತನ್ನ ಮನೆಯಲ್ಲಿ ಜಾಣಳಾದಳೇ ? ತನಗೆ ಹುಚ್ಚು ಹಿಡಿಸಿದಳೇ—ಎಂದು ದಿನಕರ ಆಗ ನೆನಸಲಿಲ್ಲ. ಅವಳ ಗಂಡನ ಬಗ್ಗೆ ಒಂದೆರಡು ಸಲ ವಿಚಾರಿಸಲೆತ್ನಿಸಿದವನು—ಅವಳ ಸಮ್ಮುಖದಲ್ಲಿ ಅದೊಂದು ವಿಚಾರವನ್ನೆತ್ತಲಾರದೆ ಹೋದ. ಆದರೆ ಒಂದು ಪ್ರಸಂಗದಲ್ಲಿ ಅವಳೇ ಹೇಳಿದ್ದಳು: "ನನಗೆ ಇನ್ನೆಂಥ ದಿನಗಳು, ಇನ್ನೆಂಥ ಸ್ಥಳ, ಇನ್ನೆಂಥ ಪರಿಸ್ಥಿತಿ ಕಾದಿದೆಯೋ—ಒಮ್ಮೆ ಅವರು ಬಂದರೆ ನನ್ನನ್ನು ಬಿಟ್ಟು ಹೋಗಲಿಕ್ಕಿಲ್ಲ. ಅವರು ಏನೆಲ್ಲ ಮಾಡಿರಲಿ, ಒಮ್ಮೆ ಬಂದರೆ ಸಾಕು; ನನ್ನ ಸ್ಥಳದಲ್ಲಿ ಇನ್ನೆಷ್ಟು ಜೀವಗಳಿಗೆ ಅವರು ಎಡೆಮಾಡಿದ್ದಾರೋ ! ನಾನು

ನಿನ್ನನ್ನು ಮಾತ್ರ ಹೊಂದಿದೆ. ಇದು ಕೇವಲ ಕ್ಷಣಿಕವಾದರೂ ನನ್ನ ಎದೆಯ ಗೂಡಿನಲ್ಲಿ ನಿನ್ನ ಮೂರ್ತಿಗೆ ಈ ಜೀವ ಬೀಳುವವರೆಗೆ ಪೂಜೆ ನಲ್ಲುತ್ತದೆ.— ನೋಡು ದಿನಕರ, ಅವರು ಬರುವಾಗ ಅವರಿಗೆ ನನ್ನನ್ನು ಕೊಟ್ಟುಕೊಳ್ಳುವ ದಕ್ಕೆ ನೀನು ಪಾತ್ರತೆ ತಂದುಕೊಟ್ಟೆ. ನಾನು ಹುಚ್ಚಿಯೇ ಆಗಿ ತಂದೆಯ ಮನೆಯಲ್ಲಿಯೇ ಇದ್ದರೆ ಅವರು ಎಂದಾದರೂ ಬಂದು ನನ್ನನ್ನು ನೋಡಿ ಕರೆದುಕೊಂಡು ಹೋಗಲು ಸಾಧ್ಯವಿತ್ತೇ ? ನನಗೆ ಅವರದೇ ಹುಚ್ಚು— ಎಂಬುದನ್ನು ಕೇವಲ ಒಮ್ಮೆ ಅವರನ್ನು ಕಂಡ ನಾನು ಹೇಗೆ ಹೇಳಿಕೊಂಡೇನು? ಸೈನಿಕನಾಗಿರುವ ಅವರಿಗೆ ದಿನಾ ಸಾವಿನ ಸಮ್ಮುಖದಲ್ಲಿ ಆಟವಂತೆ ! ಅವರು ಕುಡಿಯುತ್ತಾರೆ. ಹೆಣ್ಣುಗಳನ್ನೇನವರು ಬಿಟ್ಟಿರಲಾರರು. ನನ್ನನ್ನೂ ಅವರು ಒಮ್ಮೆ ಬಂದು ನೋಡಿದರೆ ಬಿಡುವದಿಲ್ಲ—ನನಗೆ ಆತ್ಮವಿಶ್ವಾಸವಿದೆ."

ದಿನಕರ ನಿಜವಾಗಿ ಹುಚ್ಚನಾಗಿದ್ದ. ಅವಳ ನಿಶ್ಚಲ ಮನಸ್ಸಿನ ಲೀಲೆಯನ್ನು ಕಂಡು ತನ್ನನ್ನು ಅವಳ ಮುಂದೆ ನಿವಾಳಿಸಿ ಒಗೆದುಕೊಂಡ. ಅವಳ ಅಚಲವಾದ ಜೀವನ ಶ್ರದ್ಧೆಯನ್ನು ಕಂಡು ಮಂಕುಕವಿದು ಕುಳಿತ. ಅವಳಿಗೆ ಗುರಿಯಿದೆ. ನಿಶ್ಚಿತವಾದ ಒಂದು ಉದ್ದೇಶ ಅವಳ ಕಣ್ಣ ಮುಂದಿದೆ. ಆದರೆ ತಾನು ? ಅವಳ ಸಾಧನಾಪಥದಲ್ಲಿ ಒಂದು ಗಿಡವೋ-ನೆರಳೋ-ಕಾಲುದಾರಿಯೋ—ಧರ್ಮಶಾಲೆಯೋ ಆದಂತೆ ! ತನ್ನ ಗುರಿಯಾವುದು ? ತನ್ನ ಆಕಾಂಕ್ಷೆ ಯಾವುದು ? ಕೃಷ್ಣೆಯನ್ನು ಹೀಗೆ ಒಳಸಿಕೊಂಡು ಅವಳನ್ನು ಬೀದಿಗೆಳೆಯುವ ದ್ರೋಹಮಾಡಿದಂತಾದೀತೇ ? ಇಲ್ಲ; ಒಂದು ದಿನ ಅವಳು ತನ್ನ ಪತಿಯನ್ನು ಸೇರುವವಳೇ. ತನಗೇನು ಅವಳು ಜೀವದ ಮೇಲೆ ಬಂದ ಗಂಡಾಂತರವಾಗಿ ನಿಲ್ಲಲಾರಳು—ಎಂಬ ಭರವಸೆಯೂ ಆಯಿತು. ತನ್ನ ಕರ್ತವ್ಯವೇನು ? ಅವಳು ತನ್ನನ್ನು ತಾನೇ ನಡೆಸಿಕೊಂಡು ಹೋಗುವ ಸಾಮರ್ಥ್ಯವುಳ್ಳವಳು. ತಾನೊಂದು ಅವಳ ಕೈಕೋಲು ಮಾತ್ರ.

ಅವನೂ ಕೆಲವು ಪುಸ್ತಕಗಳಲ್ಲಿ ಓದಿದ ಸ್ತ್ರೀಯ ದಾಸ್ಯವಿಮೋಚನೆ, ಗಂಡಿನ ಸ್ವೈರಾಚಾರ,—ಇತ್ಯಾದಿಗಳನ್ನು ಈ ಒರೆಗೆ ತಿಕ್ಕಲೆತ್ನಿಸಿದರೆ ಅವನಿಗೆ ಯಾವುದೂ ಗೋಚರವಾಗುವಂತಿರಲಿಲ್ಲ.

ಕೃಷ್ಣೆಯಂಥ ಹೆಣ್ಣಿಗೆ ಎಲ್ಲಿಯ ದಾಸ್ಯ ? ಅದು ಆಳುವ ಶಕ್ತಿಯುಳ್ಳ ಹೆಣ್ಣು. ಅವಳು ತನ್ನನ್ನು ಆಳುತ್ತಲೇ ಇದ್ದಾಳೆ. ಅವಳು ತನಗಂತೂ

ಭಾರವಾಗಲಾರಳು. ಅವಳ ಗಂಡನೂ ಅವಳನ್ನು ಸ್ವೀಕರಿಸದಿರಲಾರ. ಅವನು ಎಂಥವನೇ ಇರಲಿ, ಅವನನ್ನು ಕೊಂಡು ಕೊನೆಯುವ, ಅವನಿಗೆ ತನ್ನನ್ನು ಕೊಟ್ಟುಕೊಂಡಿರುವ, ಅವಳ ನಿರ್ಧಾರವನ್ನು ದಿನಕರ ಮೆಚ್ಚಿದ. ಗಂಡನ ಯಾವ ತಪ್ಪನ್ನೂ ಅವಳು ತಪ್ಪು ಎಂದು ಆಡುವದಿಲ್ಲ. ಅವನು ಕುಡಿಯುತ್ತಾನೆ—ಎನ್ನುತ್ತಾಳೆ. ತನ್ನ ಸ್ಥಳದಲ್ಲಿ ಅನೇಕ ಹೆಣ್ಣುಗಳು ಇದ್ದಿರಬಹುದು ಎನ್ನುತ್ತಾಳೆ. ಆದರೆ ಒಮ್ಮೆ ಅವನು ಬಂದರೆ, ಅವನನ್ನು ಎದುರಿಸುವದೆಂಬಲ್ಲ, ಅವನೊಡನೆ ಯಾವ ನರಕಕ್ಕೂ ಅವಳು ಹೊರಡಲು ಸಿದ್ಧಳೇ. ಗಂಡನಾದ ರಾಯಿತು. ಎದುರಿಸುವ ಪ್ರಶ್ನೆಯೇ ಇಲ್ಲ ಅವಳಿಗೆ. ಅವನ ಸ್ವಾತಂತ್ರ್ಯವನ್ನು, ಅವನ ಒಲವು-ಬಲಗಳನ್ನು—ಅವನ ಯಾವ ಹವ್ಯಾಸಗಳಿಗೂ ಅವಳು ಅಡ್ಡಿ ಮಾಡುವದಿಲ್ಲ. ಇಲ್ಲಿ ನಿರಾಕರಣೆಯ ಪ್ರಶ್ನೇಯೇ ಇಲ್ಲ.

ನಿಷ್ಪಾಪ ಜೀವ ಕೃಷ್ಣೆ !

* * * *

ಈಗ ಕೃಷ್ಣೆ ಎಲ್ಲಿದ್ದಾಳೆಂದು ದಿನಕರನಿಗೆ ತಿಳಿಯದು. ಅಂದು ಹೋದ ಅವಳು ಮತ್ತೆ ತವರಿಗೂ ಬಂದಿಲ್ಲ. ರಾಮಣ್ಣ ಒಮ್ಮೆ ಬೆಳಗಾವಿಗೆ ಬಂದಾಗ ಇವರಲ್ಲಿ ಬಂದು ಪಾರ್ವತೀಬಾಯಿಯನ್ನೇ ಕೇಳಿದ್ದ : ಕೃಷ್ಣೆಯದೇನಾದರೂ ಸುದ್ದಿಯಿದೆಯೇ—ಎಂದು. ತನ್ನತಾಯಿ ತೀರಿದಾಗ ಭಾಗೀರಥೀಬಾಯಿ ಬಂದವರು ಅತ್ತು ಕರೆದು ಅಕ್ಕನೇ ಕೃಷ್ಣೆಯನ್ನು ದಾರಿಗೆ ಹಚ್ಚಿದಳು—ಎನ್ನುತ್ತ, " ಅವಳ ದಾರಿಯಾವುದೋ—ಅವಳು ಎಲ್ಲಿದ್ದಾಳೋ—ಇದ್ದಲ್ಲಿ ಸುಖವಾಗಿರಲಿ ನನ್ನ ಮಗಳು— " ಎಂದಿದ್ದರು.

ತನ್ನ ಮದುವೆಗೆ ಅವರು ಯಾರೂ ಬರಲಿಲ್ಲ. ರಾಮಣ್ಣನ ಮನೆಯವರೆಗೆ ಹೋಗಿ ಕರೆಯಬೇಕೆಂದು ದಿನಕರ ಒಮ್ಮೆ ಅಂದುಕೊಂಡಿದ್ದ. ಅವರಿಗೇ ಮದುವೆಯ ಹೊಣೆ ಒಪ್ಪಿಸಬೇಕೆಂದೂ ಒಮ್ಮೆ ಚಿಂತಿಸಿದ್ದ. ಆದರೆ ಹೋಗಲಿಲ್ಲ. ಅವರ ನೆನಪಿನೊಡನೆ ಕೃಷ್ಣೆ ಕುಣಿದಂತಾಗಿ ತನ್ನ ಭವಿಷ್ಯಜೀವನದ ಅನಿಶ್ಚಿತವಾದ ಎಣಿಕೆಯಲ್ಲಿ ಅದೊಂದು ವ್ಯೂಹವಾದೀತೆಂದು ಹೆದರಿಕೊಂಡು ಅವರನ್ನು ಕಾಣುವ ಹವ್ಯಾಸವನ್ನೇ ಮಾಡಿರಲಿಲ್ಲ. ತನ್ನ ಅಂತರಾಳಕ್ಕೆ ಆ ನೆನಪನ್ನು ನೂಕಿ ಅದಕ್ಕೆ ಕೃಷ್ಣೆಯ ಅಚಲ ನಿರ್ಧಾರದ ಕಾವಲು ನಿಲ್ಲಿಸಿ ಆ

ಗೂಡಿನ ಮುಂದೆ ಒಂದು ಪ್ರೀತಿಯ ಹೂವಿನೆಸಳನ್ನು ಏರಿಸಿ ಕೈಮುಗಿದು 'ಕಾಪಾಡು ಕೃಷ್ಣಾ'—ಎಂದು ಬೇಡಿಕೊಂಡಿದ್ದ ಮಾತ್ರ.

## ೧೩

ದಿನಕರ ಮನೆಗೆ ಬರುವ ಸಮಯಕ್ಕೆ ಸಾಹಜಿಕವಾಗಿ ಎದುರುಗೊಳ್ಳುತ್ತಿದ್ದ ಪ್ರಭೆ, ಅವನು ಹೊತ್ತಿಗೆ ಬರದಂತಾಗಲು ತನಗೂ ತಿಳಿಯದ ಒಂದು ಬಗೆಯ ಅಶಾಂತಿಯನ್ನು ಅನುಭವಿಸುವಂತಾಯಿತು. ಅವನು ಬರುವದು; ಇವಳು ಎದುರುಗೊಂಡು ಒಂದೆರಡೇ ನಗೆ ಮಾತುಗಳಿಂದ ಸರಸವಾಡುವದು ಅವಳಿಗೆ ಅಭ್ಯಾಸವಾಗಿತ್ತು. ಒಂದು ವಾರದಿಂದ ಆ ಕ್ರಮ ತಪ್ಪಿದಂತಾಗಿದೆ. ತನ್ನ ಒಳಗಿನ ಮನಸ್ಸು ಅವನಿಗಾಗಿ ಕಾಯುತ್ತಿದೆ ಎಂಬ ವಿಚಾರ ಅವಳಲ್ಲಿ ಈಗ ಉದಿಸಿ ಕಾಡುತ್ತಿದೆ. ಮೊದಲು ಎರಡು ದಿನ 'ಮಾಮಾ ಬರಲೇ ಇಲ್ಲ, ಕುಸುಮಕ್ಕ' ಎಂದಳು. ಕುಸುಮೆಗೆ ಈ ಕಾವಲಿನ ಅರ್ಥ ಹೊಳೆಯಲಿಲ್ಲ. ಅವಳು ಸುಮ್ಮನೆ 'ಬಂದಿರಲಿಕ್ಕಿಲ್ಲ' ಎಂದಳು. ಮತ್ತೆ ಮತ್ತೆ ಗೇಟಿಗೆ ಹೋಗಿ ಬರುವ ತಂಗಿಯನ್ನು ನೋಡಿ, ಆ ಸಮಯ ಮತ್ತೆ ಏನನ್ನೂ ಮಾಡಲಾಗದ ಅವಳ ನಿಸ್ಸಹಾಯತೆಯನ್ನು ತಿಳಿದು ಕುಸುಮೆಗೆ ಇವಳ ಆಟದ ಅರ್ಥ ಹೊಳೆದಂತಾಗುವದು. ಮತ್ತೆ ಅದು ಸಹಜವಾದ ಆಸೆ ಎಂದುಕೊಳ್ಳುವಳು. ಅವಳ ಪತಿ ಬರುತ್ತೇನೆಂದು ಹೇಳಿದ ಸಮಯವೂ ಪ್ರಭೆ ಹಾಗೇ ಕಾಯುತ್ತಿದ್ದುದನ್ನು ನೆನೆದು ಸಮಾಧಾನ ಮಾಡಿಕೊಳ್ಳುವಳು.

ದಿನಕರ ರಾತ್ರಿ ಊಟ ತೀರಿಸಿಕೊಂಡು ಒಂಬತ್ತು ಗಂಟೆಯ ಮೇಲೆ ಮನೆಗೆ ಬರುತ್ತಾನೆ. ಇವನ ಹೆಜ್ಜೆಯ ಸಪ್ಪಳ ಕೇಳಿ, ಮನೆಯ ಕದ ತೆಗೆಯುವ ಸದ್ದು ಆಲಿಸಿ ಪ್ರಭೆ ಪಡಸಾಲೆಯಲ್ಲಿದ್ದರೆ ಬಾಗಿಲು ತೆರೆದು ಹಣಿಕಿ ಹಾಕುತ್ತಾಳೆ. ಅವನಿಂದಲೇ ಮಾತು ಬರಲಿ—ಎಂದು ಅವಳು ತಾನಾಗಿ ಬಾಯಿ ತೆರೆಯುವದಿಲ್ಲ. ಅವಳು ಏನಾದರೂ ಕೇಳಿಯೇ ಕೇಳುತ್ತಾಳೆ—ಎಂದು ನಿರೀಕ್ಷಿಸಿದ ದಿನಕರ ತಾನಾಗಿ ಬಾಯಿ ಬಿಡುವದಿಲ್ಲ.

ಒಂದು ದಿನ ಅದೇ ಬಂದ ಸೀತಾರಾಮರಾಯರ ಮುಂದೆ 'ಮಾಮಾ'ನ ಈಗಿನ ಬರಹೋಗುಗಳ ಬಗ್ಗೆ ಹರಟುತ್ತಿದ್ದ ಪ್ರಭೆ ದಿನಕರ ಮನೆಗೆ ಬರುತ್ತಿ

ದ್ದುದನ್ನು ಕಂಡಳು. “ ನೋಡಿ ಮಾಮಾ, (ಸೀತಾರಾಮರಾಯರನ್ನೂ ಅವಳು ಹಾಗೇ ಕರೆಯುತ್ತಾಳೆ.) ದೇಶಪಾಂಡೆ ಮಾಮಾ ಬಂದರು” ಎಂದಳು.

“ ಏನು ದಿನಕರರಾವ್, ಊಟವಾಯಿತೇ ? ” ಎಂದು ಸೀತಾರಾಮ ರಾಯರು ಬಾಗಿಲಿಗೆ ಬಂದು ಕೇಳಿದರು. “ ಆಯಿತು; ನಿಮ್ಮದು ? ” ಎಂದು ಪ್ರತಿಯಾಡಿ ದಿನಕರ ತನ್ನ ಮನೆಯ ಕಡೆಗೆ ಹೊರಳಿದ.

“ ಆಯಿತು; ಬನ್ನಿ. ಏನು ? ನಿದ್ರೆ ಕರೆಯುತ್ತಿದೆಯೇ ? ” ಎಂದ ಸೀತಾರಾಮರಾಯರ ಮಾತಿಗೆ ತನಗೂ ತಿಳಿಯದೆ ದಿನಕರ ‘ ಎಲ್ಲಿಯ ನಿದ್ದೆ ’ ಎನ್ನುವವನು ಎಚ್ಚರಗೊಂಡು “ ಇಷ್ಟು ಬೇಗ ? ” ಎನ್ನುತ್ತ ಅವರ ಮನೆಯ ಪಾವಟಿಗೆ ಹತ್ತಿದ.

“ ಹೂಂ; ಮಾಮಾನ ನಿದ್ರೆ ಕಮಲಕ್ಕ ಒಯ್ದಿದ್ದಾಳೆ ” ಪ್ರಭೆ ಬಾಯಿ ಹಾಕಿದಳು.

ದಿನಕರ ನಕ್ಕು “ ಪ್ರಭೆಗೆ ಅವಳದೇ ಚಿಂತೆ” ಎಂದು ಮಾರ್ನುಡಿದ.

“ ಅವಳಿಗೇಕೆ ಚಿಂತೆ ? ನಿಮ್ಮ ಚಿಂತೆಯನ್ನವಳು ಕಂಡಿದ್ದಾಳೆ ” ಎನ್ನುತ್ತ ಕುಸುಮೆ ಪ್ರವೇಶಿಸಿ ಒಂದು ಖುರ್ಚಿಯನ್ನು ದಿನಕರನ ಕಡೆಗೆ ಸರಿಸಿದಳು.

“ ಏನು ? ಈಗ ಕ್ಲಬ್ಬಿನಲ್ಲಿ ಮತ್ತೆ ಬ್ರಿಜ್ ಸುರು ಮಾಡಿದ್ದೀರಾ ? ” ಸೀತಾರಾಮರಾಯರು ಸಹಜವಾಗಿ ಕೇಳಿದರು.

ಕುಳಿತುಕೊಳ್ಳುತ್ತ ದಿನಕರ—

“ ಇಲ್ಲ; ಕ್ಲಬ್ಬಿಗೆ ಹೋಗೇ ಇಲ್ಲ. ಆಫೀಸಿನ ಕೆಲಸವೇ ಹೆಚ್ಚಾಗಿದೆ” ಎಂದ.

“ ಅದೆಂಥ ಆಫೀಸು ರಾಯರೇ, ರಾತ್ರಿಯ ವರೆಗೆ ?”

“ ರಾತ್ರಿಯವರೆಗೇನಲ್ಲ. ಏಳುಗಂಟೆಯವರೆಗಿದ್ದು ವಾಕಿಂಗ್ ಹೋಗುತ್ತೇನೆ.” ದಿನಕರ ಸತ್ಯವನ್ನೇ ನುಡಿದ.

“ಅದು ಬಹಳ ಒಳ್ಳೆಯದು. ಆದರೆ ಹಾಳು ಮಳೆಯೊಂದು ಜಿಟಗುತ್ತದಲ್ಲ—ಮಳೆಗಾಲದಲ್ಲಿ ಎಂಥ ವಾಕಿಂಗು ? ” ಎಂದರು.

" ಈಗ ಅಂಥ ಮಳೆಯೇನೂ ಇಲ್ಲ—ಯಾಕೋ—ಏನೋ— ನೋಡಿರಿ, ಇನ್ನೂ."

" ನಿಮ್ಮ ವಾಕಿಂಗಿಗೆ ಅಡ್ಡಿಯಾಗಬಾರದೆಂದಿರಬೇಕು." ಪ್ರಭೆಯ ಮಾತು.

ಕುಸುಮ ಅಡಿಕೆ ಎಲೆಯ ಡಬ್ಬಿ ತಂದಿಡುತ್ತ ದಿನಕರನಿಗೆ " ನಾಳೆ ನಮ್ಮ ವಸಂತನ ಹುಟ್ಟಿದ ಹಬ್ಬ. ನೀವು ಇಲ್ಲೇ ಊಟಕ್ಕೆ ಬರಬೇಕು " ಎಂದು ಆಮಂತ್ರಿಸಿದಳು.

" ಹೌದು, ದಿನಕರರಾವ್, ನಾನೂ ಕ್ಯಾಂಪ್ ಮೇಲಿದ್ದವನು ಅದಕ್ಕಾಗಿಯೇ ಬಂದಿದ್ದೇನೆ. ಹೇಗೂ ನಾಳೆ ಆದಿತ್ಯವಾರ. ಆಫೀಸಿಲ್ಲ. ಹೊರಗೆಲ್ಲಿಯೂ ಹೋಗಬೇಡಿ " ಎಂದು ಸೀತಾರಾಮರಾಯರೂ ಬೇಡಿಕೊಂಡರು.

ಎಲೆ ಅಡಿಕೆಯ ಡಬ್ಬಿಯನ್ನು ದಿನಕರನ ಮುಂದೆ ನರಿಸುತ್ತ ಪ್ರಭಾ " ಕಮಲಕ್ಕ ಎಂದು ಬರುತ್ತಾಳೆ, ಮಾಮಾ ? ಪತ್ರ ಬಂದಿದೆಯೆ ? ನಾನೂ ಊರಿಗೆ ಹೋಗುವವಳು. ಅಷ್ಟರಲ್ಲಿ ಬಂದಾಳೆ ?" ಎಂದು ನುಡಿದಳು.

" ನೀನು ಯಾಕೆ ಹೋಗುತ್ತೀ ಪ್ರಭಾ " ದಿನಕರ ಅವಸರದಲ್ಲಿ ನುಡಿದ.

" ಅವಳಿಗೆ ಶಾಲೆಯಿಲ್ಲವೇ? ಎಷ್ಟು ದಿನ ಬಿಟ್ಟು ಇದ್ದಾಳು" ಕುಸುಮೆಯೆಂದಳು.

" ಯಾಕೆ? ಇಲ್ಲಿಯೂ ಶಾಲೆಗಳಿವೆ. " ಸೀತಾರಾಮರಾಯರೆಂದರು.

"ನಾನೂ ಅದನ್ನೇ ಅನ್ನುತ್ತೇನೆ" ದಿನಕರನೆಂದ. "ಹಾ, ಕಮಲೆ ನಿನಗೇ ಏನಾದರೂ ಬರೆದಿರಬೇಕು. ಎಂದು ಬರುತ್ತಾಳಂತೆ ?"

" ಇಲ್ಲ ಮಾಮಾ, ನನಗೇನೂ ಬರೆದಿಲ್ಲವೆಂದೇ ನಿಮ್ಮನ್ನು ಕೇಳಿದೆ: ನನಗೆ ಬರೆದಿದ್ದರೆ ನಿಮಗೆ ಹೇಳದಿರುತ್ತಿದ್ದೆನೆ ?"

" ಕಮಲಾಬಾಯಿ ನಿನಗೆ ಬರೆದಿದ್ದರೇನು ?" ಸೀತಾರಾಮರಾಯರು ಕೇಳಿದರು.

" ಹೂಂ; ಇವಳಿಗೆ ಒಂದು ಕಾಗದ ಬರೆದಿದ್ದರು. ದಿನಕರರಾಯರು ತಮಗೆ ಬರೆದೇ ಇಲ್ಲವೆನ್ನುತ್ತಾರೆ. ಇವರು ಹೀಗನ್ನುತ್ತಾರೆಂದು ಕಮಲಕ್ಕನಿಗೆ ಉತ್ತರಬರೆದಳು ಪ್ರಭಾ. ಅವರು ಇವಳಿಗೂ ಮತ್ತೆ ಬರೆಯಲಿಲ್ಲ" ಕುಸುಮೆ ಸ್ಪಷ್ಟಪಡಿಸಿದಳು.

“ ನಿಮ್ಮ ಮಾವನವರಿಗೆ ಹೇಗಿದೆ ? ” ಸೀತಾರಾಮರಾಯರು ಕೇಳಿದರು.

“ ಅದೂ ತಿಳಿಯದು. ”

“ ನಾಳೆ ರವಿವಾರವಿದೆ; ಹೋಗಿಬಂದರಾಯಿತು. ” ಸೀತಾರಾಮ ರಾಯರು ತಮ್ಮ ಮನೆಗೆ ಅವನನ್ನು ಆಮಂತ್ರಿಸಿದ್ದನ್ನೂ ಮರೆತು ಆಡಿದರು.

“ ನಾನೂ ಅದೇ ವಿಚಾರದಲ್ಲಿ.... ”

“ ಹೂಂ; ನಮ್ಮ ಮಾಮಾ ದೇಶಪಾಂಡೆ ಮಾಮಾಗೆ ನಾಳೆ ಊಟಕ್ಕೆ ಕರೆದು ಊರಿಗೆ ಹೋಗೆನ್ನುತ್ತಾರೆ. ಅದನ್ನೇ ನೆನಪಿನಲ್ಲಿಟ್ಟುಕೊಂಡು ಹೋಗ ಬೇಕು ನೋಡಿರಿ ಮಾಮಾ ” ಎಂದಳು ಪ್ರಭಾ.

“ ಏನು ಮಾತಿದು ? ನಿಮ್ಮದೇ ನಿಮಗೆ ನೆನಪಿಲ್ಲ ”

ಗಂಡನಿಗೆ ಕುಸುಮೆ ಕೊಸರಿದಂತೆ ಮಾತಾಡಿದಳು.

“ ನಾಳೆ ಏನಾದರೂ ಒಂದು ಕೇಸ್ ಇದೆಯೆಂದು ಅವರೂ ಹೊರ ಟರೇ ” ಪ್ರಭೆ ನಗೆಯಾಡಿದಳು.

ಸೀತಾರಾಮರಾಯರು ನಗುತ್ತ ಎದ್ದು ನಿಂತುದನ್ನು ನೋಡಿ ದಿನಕರನೂ ಏಳಲು ಹವಣಿಸಿದ.

“ ನೀವು ಕುಳಿತುಕೊಳ್ಳಿ ದಿನಕರರಾವ್, ಇಂದಿನ ‘ ಟೈಮ್ಸ ’ ತರು ತ್ತೇನೆ ” ಎಂದರು ಸೀತಾರಾಮರಾಯರು.

ಮತ್ತೆ ಹರಟೆ ಬೆಳೆಯುತ್ತದೆಂದು ದಿನಕರ “ ಇಲ್ಲ, ನಾಳೆ ನೋಡೋಣ. ಯಾಕೋ ಬಹಳ ದಣಿವಾಗಿದೆ. ಹೋಗಿ ಬಿದ್ದುಕೊಳ್ಳುತ್ತೇನೆ ” ಎನ್ನುತ್ತ ಬಾಗಿಲಿನ ಕಡೆಗೆ ಕಾಲುಹಾಕಿದ.

ಅವನು ದಣಿದಂತೇ ಕಂಡ ಪ್ರಭೆಗೆ. ಇಳಿದು ಹೋದಂತೆಯೂ ಅವ ಳಿಗೆ ಅನಿಸಿತು. ಮಾತಿಲ್ಲದೆ ಅವನ ಹಿಂದಿನಿಂದ ಹೋಗಿ ಬಾಗಿಲ ಬದಿಗೆ ನಿಂತಳು. ದಿನಕರ ಪಾವಟಿಗೆ ಇಳಿಯುವದನ್ನು ಕಂಡು ತಿರುಗಿ ಅಕ್ಕನನ್ನು ನೋಡಿದಳು. ಅವಳೂ ಇವಳನ್ನು ನೋಡಿ “ ಬಾಗಿಲು ಮುಂದೆ ಮಾಡು ಪ್ರಭಾ ” ಎಂದಳು. “ ನಾನೂ ಅದಕ್ಕೇ ಬಂದಿದ್ದೆ ” ಎನ್ನುತ್ತ ಪ್ರಭೆ ಮತ್ತೊಮ್ಮೆ ಹೊರಕ್ಕೆ ನೋಡಿ ಬಾಗಿಲು ಹಾಕಿದಳು.

ದಿನಕರ ಬಾಗಿಲು ತೆರೆದು ದೀಪ ಹಾಕಿದಾಗ ಒಂದು ಕಾಗದ ಬಿದ್ದು ದನ್ನು ಕಂಡ. ಹಾಗೇ ಖುರ್ಚಿಯಲ್ಲಿ ಕೂಡುತ್ತ ನೋಡಿದ—ಕಮಲೆಯ ಕಾಗದ. ಆತುರದಿಂದ ಬಿಚ್ಚುತ್ತ "ಪ್ರಭಾ—" ಎಂದ. ಅವರ ಬಾಗಿಲು ಹಾಕಿದ್ದನ್ನು ನೋಡಿ ಪತ್ರವನ್ನೊಡೆದು ಓದಿಕೊಂಡ.

ಬಹಳ ದೊಡ್ಡ ಕಾಗದ ಬರೆದಿದ್ದಳು ಕಮಲ. ಅವಳು ಇಷ್ಟುದ್ದ ಬರೆ ದಾಳೆಂದು ದಿನಕರ ನೆನಸಿರಲೇ ಇಲ್ಲ. ಒಮ್ಮೆ ಕಣ್ಣಾಡಿಸಿ ಬೂಟು, ಕೋಟು ಕಳಚಿ, ನಾಲ್ಕು ದಿನದ ಹಿಂದೆ ಕೊಡವಿ ಹಾಸಿದ ತನ್ನ ಹಾಸಿಗೆಯ ಮೇಲೆ ಬಿದ್ದುಕೊಂಡು ಮತ್ತೊಮ್ಮೆ ಕಮಲೆಯ ಕಾಗದವನ್ನು ಪಠಿಸಿದ.

"ನೀವು ಸಿಟ್ಟಿಗೆದ್ದಿದ್ದೀರಿ—" ಎಂದು ಮತ್ತೆ ಮತ್ತೆ ಕಮಲೆ ಬರೆದಿ ದ್ದಾಳೆ. 'ಪತ್ರವನ್ನೇ ಬರೆಯುವದಿಲ್ಲ ನೀವು' ಎಂದು ಹದಿನೈದು ದಿನದಲ್ಲಿ ತಾನು ಬರೆದ ಪ್ರಥಮ ಪತ್ರದಲ್ಲಿ ಆರೋಪಿಸಿದ್ದಾಳೆ. 'ಒಮ್ಮೆಯೂ ಬಂದು ಹೋಗಲಿಲ್ಲ' ಎಂದು ಕಾತರಗೊಂಡಿದ್ದಾಳೆ. 'ಅಪ್ಪ ಹೇಳಿದರು : ಒಮ್ಮೆ ನೀವೇ ಬಂದು ಕರೆದುಕೊಂಡು ಹೋಗಬೇಕಂತೆ' ಎಂದಿದ್ದಾಳೆ. ವೆಂಕಟ ರಾಯರಿಗೆ ಹೇಗಿದೆಯೆಂದು ತಿಳಿಸಿಯೇ ಇಲ್ಲ. 'ಯಾವಾಗ ಬರುತ್ತೀರಿ ?' 'ಬೇಗ ಬನ್ನಿ.' 'ಉತ್ತರ ಬರೆಯಿರಿ' ಇದೇ ಮಾತು ಮತ್ತೆ ಮತ್ತೆ. 'ಊಟ ಎಲ್ಲಿ ಮಾಡುತ್ತೀರಿ ? ಮನೆಯಲ್ಲಿ ಸಜ್ಜಿಗೆ ಇತ್ತು. ತುಪ್ಪವಿತ್ತು. ಬರುವಾಗ ಮಾಡಿದ ಉಂಡಿಯಲ್ಲಿ ನಾಲ್ಕನ್ನು ಕಪಾಟಿನಲ್ಲಿ, ಹಿತ್ತಾಳಿಯ ಡಬ್ಬಿಯಲ್ಲಿಟ್ಟಿದ್ದೆ. ತಿಂದಿರಾ ?' ಎಂದು ಕೇಳಿದ್ದಾಳೆ. 'ಇಸ್ಪೀಟು ಆಟಕ್ಕೆ ಹೋಗಬೇಡಿರಿ; ನನ್ನಾಣೆಯಾಗಿದೆ—' ಎಂದಿದ್ದಾಳೆ. 'ಅಗಸರವನಿಂದ ಬಟ್ಟೆ ಬಂತೇ ? ಹಾಲಿ ನವ ಬಂದಾಗ ಮನೆಯಲ್ಲಿರುತ್ತೀರಾ ? ಕುಸುಮಕ್ಕಗೆ ಹೇಳಿ ಅವರ ಕೆಲಸ ದವಳಿಂದ ಮನೆಯ ಕಸ-ಮುಸರಿ ಮಾಡಿಸಿಕೊಳ್ಳಿರಿ. ಸೈಕಲ್ ನಾನಿದ್ದರೆ ದಿನಾ ಒರೆಸುತ್ತಿದ್ದೆ. ನೀವು ಎಂದಾದರೂ ಅದರ ಮೇಲಿನ ಧೂಳು ಹೊಡೆ ದಿದ್ದೀರಾ ? ಧಾರವಾಡದ ಧೂಳದಿಂದ ಸೈಕಲ್ ಕೆಡುತ್ತದೆ—" ಎಂದೇ ನೆಲ್ಲಾ ಬರೆದಿದ್ದಾಳೆ.

ದಿನಕರ ಮತ್ತೆ ಮತ್ತೆ ಓದುತ್ತಾನೆ. ಇವಳು ಇದನ್ನೆಲ್ಲಾ ತಾನು ಬರುವ ಮುಂದೆ ಬರೆಯುತ್ತಾಳಲ್ಲಾ—ಎನ್ನುತ್ತಾನೆ. ಬರಹ ನೋಡಿದರೆ ಒಂದೇ ದಿನ ಬರೆದಂತಿಲ್ಲ. ಹದಿನೈದು ದಿನವೂ ಅಷ್ಟಷ್ಟು ಬರೆದಳೇನೋ! ಅದೆಲ್ಲಾ

ನೋಡುವಾಗ ಕಮಲೆ ತನ್ನೆದುರೇ ಕುಳಿತು ಮಾತಾಡಿದಂತೆನಿಸಿತು ದಿನಕರ ನಿಗೆ. ತಿಂಗಳ—ಮೂರುದಿನದ—ರಜೆಯಲ್ಲಿ ದೂರ ನಿಂತು "ಅದನ್ನು ಮಾಡಿರಿ; ಅಲ್ಲಿ ನೋಡಿರಿ; ಹೀಗೆ ಮಾಡಿದರೆ ಹೇಗೆ ? ಗಂಡಸರಿಗೊಂದೂ ತಿಳಿಯುವದಿಲ್ಲ. ಎಂಜಲ ಮುಸರಿ ಕಲಸಿದರೆ ಚೇಳು ಬರುತ್ತವೆ. ಹೂ—ತಾಕೀತು. ಅಲ್ಲಿ ನನ್ನ ತಂಬಿಗೆಯಿದೆ. ಹಾಸಿಗೆ ಮುಟ್ಟಿಯೇ ಬಿಟ್ಟಿರಲ್ಲಾ ! ಥೂ, ದೂರ ಸರಿಯಿರಿ. ಇದೇನು ಚೆಂದ ? ನೋಡಿದವರೇನಂದಾರು ?" ಎಂದೇನೆಲ್ಲಾ ಎದುರೇ ನಿಂತು ಆಡುತ್ತಿದ್ದ ಕಮಲೆ ಇಂದು ದಿನಕರನ ಕೈಯಲ್ಲಿ—ಪತ್ರದಲ್ಲಿ ಕುಳಿತು ಮಾತಾಡಿದಂತೆ ದಿನಕರ ನೆನಸುತ್ತಾನೆ.

ಹೌದು; ಸೀತಾರಾಮರಾಯರೆಂದಂತೆ ಇಂದು ರಾತ್ರಿಯೇ ಹೊರಟು ಬಿಡಬೇಕು. ವಸಂತನ ಹುಟ್ಟಿದ ದಿನವೆಂದು ಹೇಳಿದರಲ್ಲ—ಕಮಲೆಯೊಡನೆ ಬಂದು ಬೆಳಗಾವಿಯಿಂದಲೇ ಮಗುವಿಗೆ ಉಡುಗರೆತಂದು ಸಂಜೆಗೇ ಒಪ್ಪಿಸಿ ಬಿಡಬೇಕು. ಇಬ್ಬರೂ ಸಂಜೆ ಅವರ ಮನೆಯಲ್ಲಿಯೇ ಉಂಡರಾಯಿತು. ಛೇ, ಅವರನ್ನು ಕೇಳದೆ ಹೇಗೆ ಹೋಗುವದು ? ಇನ್ನೂ ಎಚ್ಚರವಾಗಿದ್ದರೆ ಈಗ ಹೇಳಿ ಹೋದರಾಯಿತು—ಎಂದು ಹೊರಗೆ ಬಂದ. ಅಟ್ಟದ ಮೇಲೆ ಮಲಗುವ ಪ್ರಭೆಯ ಕೋಣೆಯಲ್ಲಿ ದೀಪವಿನ್ನೂ ಉರಿಯುತ್ತಿದೆ. ಕೆಳಗೆ ಸೀತಾರಾಮರಾಯರ ಕೋಣೆಯ ಕಿಟಕಿ ಹಾಕಿದೆ; ಮಲಗಿಕೊಂಡಿರಬೇಕು.

ಪ್ರಭೆಯನ್ನೇ ಕೂಗಿ ನೋಡಲೇ—ಎಂದ. ಏನು ಅಂಥ ಕೆಲಸ ? ರಾತ್ರಿ-ಪ್ರಭೆಯನ್ನು ಕೂಗುವದೇ? ಅದೂ ಇದೀಗ ಅವರಲ್ಲಿಂದ ಬಂದಿದ್ದೇನೆ-ಎಂದುಕೊಂಡು ಸಮಯನೋಡಿದ.

ನಾನು ಇದೀಗ ಅವರ ಮನೆಯಿಂದ ಬಂದದ್ದೇ ? ಹನ್ನೊಂದಾಗಿದೆ. ಗಾಡಿ ಒಂದು ಗಂಟೆಗಿದೆ. ಆದರಿಂದಲೇ ಯಾಕೆ ಹೋಗಬಾರದು? ರಾತ್ರಿಗಾಡಿ, ಗದ್ದಲ, ನಿದ್ರೆಯೇ ಆಗುವದಿಲ್ಲ. ಬೆಳಗ್ಗೆ ಎಂಟಕ್ಕೆ ಹೋದರಾಯಿತು—ಎಂದು ಬಾಗಿಲು ಬಡಿದು ಹಾಸಿಗೆಗೆ ಬಂದ.

ಬೆಳಗ್ಗೆ ಹೋದರೆ ಮಧ್ಯಾಹ್ನ ಸೇರಿ ಆಗಲೇ ಹೊರಡುವದಾಗ ಬೇಕಲ್ಲ ?—ಬಸ್ಸಿಗೆ ಹೋಗುವದೇ ವಾಸಿ. ಏಳಕ್ಕೆ ಹೊರಟು, ಹತ್ತಕ್ಕೆ ತಲಪಿ, ಸಂಜೆ ನಾಲ್ಕಕ್ಕೆ ಹೊರಟು ಏಳಕ್ಕೆ ಬಂದರಾಯಿತು—ಎಂದು ದೀಪ ವಾರಿಸಿ ಹಾಸಿಗೆಯ ಮೇಲೆ ಬಿದ್ದುಕೊಂಡ.

ಕಣ್ಣು ಮುಚ್ಚಿಕೊಂಡರೆ ಬೇರೆ ಲೋಕವೇ ನಿಂತಂತಾಯಿತು. ಕೃಷ್ಣೆ ಯೊಂದು ಕಡೆಯಿಂದ ಎಳೆಯುತ್ತಾಳೆ. ಕಮಲೆ ಒಂದು ಬದಿ ನೋಡುತ್ತ ನಿಂತಿದ್ದಾಳೆ. "ಇವರು ಯಾರು ಮಾಮಾ ?" ಎಂದು ಪ್ರಭೆ ಪ್ರಶ್ನಿಸುತ್ತಿದ್ದಾಳೆ. ಒಬ್ಬೊಬ್ಬರನ್ನೇ ಕಾಣ ಬಯಸುತ್ತಾನೆ. ಆದರೆ ಸಂತೆಯೇ ನೆರೆದಿದೆ.

* * * *

ಯಾವಾಗ ನಿದ್ರೆ ಬಂತೋ—ಅವನು ಬೆಳಗ್ಗೆ ಎದ್ದಾಗ ಎಂಟು ಗಂಟೆ ! ಅದೂ ಸೀತಾರಾಮರಾಯರು ಕೈಯಲ್ಲಿ 'ಸಂಯುಕ್ತ ಕರ್ನಾಟಕ' ಹಿಡಿದು ಕೊಂಡು ಬಂದು ಎಬ್ಬಿಸಿದಾಗ.

## ೧೪

ದಿನಕರ ಕಮಲೆಯನ್ನು ಕರೆದುಕೊಂಡು ಬಂದಿದ್ದಾನೆ. ಪ್ರಭೆ ತನ್ನ ಮನೆಗೆ ಹೊರಟು ಹೋಗಿದ್ದಾಳೆ. ದಿನಕರನ ಅತ್ತಿಕೊಳ್ಳದ ಯಾತ್ರೆ ನಡೆದಿದೆ. ಆಫೀಸು ಬಿಟ್ಟಮೇಲೆ ನೇರ ಮನೆಗೆ ಬಂದು, ಉಪಹಾರ ತೀರಿಸಿ, ವಾಕಿಂಗ್ ಎಂದು ಹೊರಡುತ್ತಾನೆ. ಕಮಲೆಯನ್ನೂ ಕರೆದರೆ, 'ಮಳೆಯಲ್ಲಿ ಹಳ್ಳ-ಕೊಳ್ಳಕ್ಕೆ ಎಲ್ಲಿ ಬರಲಿ ?' ಎನ್ನುತ್ತಾಳೆ. ದಿನಕರನ ಆ ಹುಲ್ಲುಗಾವಲ ಈಗ ಮೊದಲಿನ ಒಣ ನೆಲವಲ್ಲ. ಕೆಸರಿನಿಂದ ಕಿಚಿ-ಕಿಚಿಯಾಗಿದೆ. ಆದರೂ ಅವನು ಛತ್ರಪತಿಯಾಗಿ ನಡೆದುಕೊಂಡು ಹೋಗಿ ತನ್ನ ಆ ಸ್ಥಳವನ್ನು ಮುಟ್ಟಿ ಬರುತ್ತಾನೆ.

ಕಮಲೆ ನಿಶ್ಚಿಂತಳು. ಪತಿಗಾಗಿ ತನ್ನ ಕೆಲಸಗಳನ್ನು ತಪ್ಪದೆ ನಿರ್ವಹಿಸುತ್ತಾಳೆ. ಉಳಿದ ಸಮಯ ಕುಸುಮಕ್ಕನೊಡನೆ ಹರಟೆಯಲ್ಲಿಯೋ—ವಸಂತನೊಡನೆ ಲಲ್ಲೆಯಲ್ಲಿಯೋ ಕಳೆಯುತ್ತಾಳೆ. ಒಂದೊಂದು ಸಮಯ ಮನೆಯಲ್ಲಿಯೇ ಪ್ರಭೆಯಿಂದ ಕಲಿತ ಹೆಣಿಕೆಯ ಕೆಲಸ ಮಾಡುತ್ತ ಕೂತಿರುತ್ತಾಳೆ.

ದಿನಕರನೀಗ ನಿದ್ರೆಯನ್ನೇ ಮಾಡುವದಿಲ್ಲ. ಮಲಗಿದ ಕಮಲೆಯನ್ನು ಮತ್ತೆ ಮತ್ತೆ ಕರೆದು ನಿದ್ರೆ ಬಂತೇ—ಎಂದು ಕೇಳುತ್ತಾನೆ. ಒಮ್ಮೊಮ್ಮೆ ಅವಳನ್ನು ನಿದ್ರೆಯಿಂದ ಎಚ್ಚರಿಸಿ 'ನಿನಗೆಷ್ಟು ನಿದ್ರೆ ?' ಎನ್ನುತ್ತಾನೆ. 'ನಿಮಗೆ

ಯಾಕೆ ನಿದ್ರೆಯಿಲ್ಲ ? ಹಗಲೆಲ್ಲ ದುಡಿದು ಬಂದಿರುತ್ತೀರಿ. ನಿದ್ರೆಮಾಡಿರಿ' ಎಂದು ಅವನ ಹಣೆಯಮೇಲೂ, ತಲೆಯಮೇಲೂ, ಕೈಯಾಡಿಸಿ ಅವನನ್ನು ಸಂತಯಿಸುತ್ತಾಳೆ. ಆಡುವ ಕೈಯನ್ನೇ ಹಿಡಿದುಕೊಂಡು ಮುತ್ತಿಟ್ಟು ದಿನಕರ, 'ಯಾಕೋ ನೋಡು-ಕಮಲ, ನೀನು ನಿನ್ನ ತವರಿಗೆ ಹೋದಂದಿನಿಂದ ನನಗೆ ಹೀಗಾಗಿದೆ ಎನ್ನುತ್ತಾನೆ. 'ಯಾಕೆ ಹೀಗೆ ಮಾಡುತ್ತಾರೆ—ನನ್ನ ಪತಿ ? ಅವರಿಗೆ ಯಾವ ಚಿಂತೆ ಕಾಡುತ್ತಿದೆ ?' ಎಂದು ಕಮಲೆಯೂ ಚಿಂತಿಸುತ್ತಾಳೆ. ಆದರವಳಿಗೆ ಏನೊಂದೂ ತೋಚುವದಿಲ್ಲ.

ಒಂದು ದಿನ ರಾತ್ರಿ ದಿನಕರ ಕಮಲೆಯನ್ನೆಬ್ಬಿಸಿ ಕೂಡಿಸಿದ. ಅವಳು ಕಣ್ಣೊರಸುತ್ತ 'ಏನು ?' ಎಂದಳು. 'ಏನೂ ಇಲ್ಲ' ಎನ್ನುತ್ತ ಅವಳನ್ನೇ ನೋಡುತ್ತ ಕುಳಿತ. 'ಯಾಕೆ ಹೀಗೆ ಮಾಡುತ್ತೀ—ನನ್ನ ರಾಜ !' ಎಂದು ಕಮಲೆ ವಾತ್ಸಲ್ಯದಿಂದ ಅವನನ್ನು ಬಾಚಿ ತಬ್ಬಿಕೊಂಡಳು. ಅವಳ ಎದೆಯ ಮೇಲೆ ತಲೆಯಿಟ್ಟು ದಿನಕರ ಅಳುತ್ತಿದ್ದುದನ್ನು ನೋಡಿ ಕಮಲೆ ಗಾಬರಿಯಾದಳು. 'ನನ್ನ ಮೇಲೆ ಕೋಪವೇ ?' ಎಂದು ಕೇಳಿದಳು. 'ನಾನೇನು ಮಾಡಿದ್ದೇನೆ ನಿಮಗೆ ?' ಎಂದಳು—'ನನ್ನಾಣೆಯಾಗಿದೆ—ಏನೆಂದು ಹೇಳಿ' ಎಂದು ಕಾತರಿಸಿದಳು.

"ನನ್ನನ್ನು ಕ್ಷಮಿಸುವಿಯಾ ಕಮಲ ?"

"ಯಾವ ತಪ್ಪಿಗೆ ? ಏನು ವಿಷಯ—ಹೇಳಿ; ಹೇಳಿ" ಎಂದು ಅವನ ಭುಜ ಅಲುಗಿಸಿದಳು.

ದಿನಕರ ತಬ್ಬಿಕೊಂಡು ಅವಳ ಮುಖದಲ್ಲಿ ಮುಖವಿಟ್ಟು ಅಳತೊಡಗಿದ. ಕಮಲೆಯೂ ನಿರುಪಾಯಳಾಗಿ ಅಳತೊಡಗಿದಳು.

ಹೀಗೇ ಅವರು ಅಳುತ್ತ ನಿದ್ರೆಹೋದರು.

* * * *

ಮರುದಿನ ದಿನಕರ ಆಫೀಸಿಗೆ ಹೋದಾಗ ಕಮಲೆ ತನ್ನ ಪತಿಯ ಮುನ್ನಾದಿನದ ರಾತ್ರಿಯ ಅಳುವನ್ನು ನೆನೆದುಕೊಂಡಳು. ಅವನು ಯಾವುದೋ ಚಿಂತೆಯಲ್ಲಿದ್ದುದನ್ನು ಕಂಡುಕೊಂಡಳು. ಅದೇನೆಂದು ಚಿಂತಿಸಿದಳು. ಅವಳೆಣಿಕೆಗೆ ಯಾವುದೂ ತೋಚಲಿಲ್ಲ. ಕೊನೆಗೆ ಏನಾದರೂ ಆಫೀಸಿನ ತೊಂದರೆಯಿರಬೇಕು—ಆರ್ಥಿಕ ತೊಡಕು ಬಂದಿರಬೇಕು-ಎಂದವಳಿಗೆ ಹೊಳೆಯಿತು.



ಅಂಥದೇನಾದರೂ ಇದ್ದರೆ ತಾನೇನು ಮಾಡಬಲ್ಲೆ—ಎಂದು ತನ್ನ ನಿಸ್ಸಹಾಯತೆಯನ್ನು ಹಳಿದುಕೊಂಡಳು. ತನ್ನ ಪ್ರೀತಿಯ ಉತ್ಕಟತೆಯಿಂದ ತನ್ನ ದೇಹದಂಡನೆಯಿಂದ ಅದನ್ನು ನಿವಾರಿಸಲು ಶಕ್ತಳಾಗುವುದಾದರೆ ಅವಳು ಸಂತೋಷಿಸುತ್ತಿದ್ದಳು. ಆದರೆ ಅದು ಯಾವ ಸಮಸ್ಯೆಯೆಂದು ತಿಳಿಯದೆ ಅವಳು ಅದಕ್ಕೆ ಏನು ಪರಿಹಾರ ಕೊಟ್ಟಾಳು ?

ಅಂದು ಸಂಜೆ ದಿನಕರ ದಿನಕ್ಕಿಂತ ಮುಂಚೆಯೇ ಮನೆಗೆ ಬಂದ. ಹೊರಗೆ ದಿನಾ ಹೊರಡುವವನು ಅಂದು ಹೊರಡಲಿಲ್ಲ. ಕಮಲೆ ಅವನು ಹೊರಡದಿದ್ದುದನ್ನು ನೋಡಿ, ಯಾಕೆ ಹೊರಡಲಿಲ್ಲವೆಂದು ಕೇಳಬೇಕೆಂದಳು. ಆದರೆ ಅದಕ್ಕೂ ನೊಂದುಕೊಂಡಾನೆಂದು ಸುಮ್ಮನಾದಳು.

ದಿನಕರ 'ಕಮಲ' ಎಂದು ಕರೆದ. 'ಏನು ?' ಎಂದು ಅವಳು ಮುಂದೆ ಬಂದಳು. 'ಬಾ, ಕುಳಿತುಕೋ, ನನ್ನೆದುರು' ಎಂದ. ಅವನೆದುರು ಹಾಗೆ ಕುಳಿತುಕೊಳ್ಳುವುದು ಅವಳಿಗೆ ಹೊಸದಲ್ಲ. ಬಂದು ಒಂದು ಸ್ಟೂಲನ್ನೆಳೆದುಕೊಂಡು ಕೂತಳು.

"ಏನೇ—ಫೋಟೋ ತೆಗೆಸಿಕೊಳ್ಳುವವರಂತೆ ಕೂತಿರುವಿಯಲ್ಲ ?" ಎಂದು ನಗೆಯಾಡಿದ.

ಕಮಲೆಯ ಮುಖ ರಾಗರಂಜಿತವಾಗಿ ನಾಚಿಕೆಯ ನಗೆಯಿಂದ ಅರಿಯರಳಿತು.

ಅಂದಿನ ಅವನ ಸರಸದಿಂದ ಅವಳು ತುಂಬ ಸಂತೋಷಗೊಂಡಳು. ಮುನ್ನಿನ ಅವನ ಚಿಂತಾಕುಲವಾದ ಮುಖವನ್ನು ನೆನಸಿ—'ಛೀ, ಅದೇಕೆ ಈಗ ?' ಎಂದು ಮರೆಯಲೆತ್ನಿಸಿದಳು. ಅವನನ್ನು ಮತ್ತೆ ಮತ್ತೆ ಹಸಿದ ಕಣ್ಣುಗಳಿಂದ ನೋಡಿದಳು.

"ಯಾಕೆ ಹಾಗೆ ನೋಡುತ್ತೀ—ಕಮಲ ?"

"ಯಾಕೆ ನೋಡಬಾರದೇ ?"

"ನೋಡು; ಅವಶ್ಯವಾಗಿ ನೋಡು. ನಾನು ಸದಾ ನನ್ನ ನೋಟದಿಂದ ನಿನ್ನನ್ನು ತಿನ್ನುತ್ತಿರುತ್ತೇನೆ. ನೀನೂ ಹಾಗೆ ನನ್ನನ್ನು ತಿನ್ನಲೆಳಸುತ್ತೀಯಾ ?"

ನೋಟದಿಂದ ತಿನ್ನುವದೆನ್ನುವದು ಅವಳಿಗೆ ಹೊಳೆಯದು. ಆದರವಳು ಅದನ್ನೇ ಮಾಡುತ್ತಿದ್ದುದನ್ನು ಗುರುತಿಸಿದ ಪತಿಯ ಮಾತನ್ನು ಮೆಚ್ಚಿದಳು.

ಪತಿ ಅಂದು ಒಳ್ಳೆಯ ಲಹರಿಯಲ್ಲಿರುವುದನ್ನರಿತು ಅದನ್ನು ಹಾಗೇ ಕಾಪಾಡಿ ಕೊಳ್ಳುವ ಸಂಕಲ್ಪ ಮಾಡಿದಳು. ತನ್ನಿಂದ ಯಾವ ಲೋಪವೂ ಬಾರದಿರ ಲೆಂದು ಮನದಲ್ಲಿಯೇ ಮಂಗಲಗೌರಿಗೆ ಹರಕೆ ಹೊತ್ತಳು.

ಪತಿ ತನ್ನನ್ನು ಆಗಾಗ ತಿರುಗಾಡಲು ಕರೆಯುತ್ತಾನೆ; ತಾನು ಈಚೆಗೆ ಹೋಗೇ ಇಲ್ಲವೆಂದು ನೆನೆದು ಅವನನ್ನು ನಿರಾಶೆಗೊಳಿಸಿದ್ದಕ್ಕಾಗಿ ಕೊರಗುತ್ತ ಅಂದು ಅವನು ಕರೆದರೆ ಸಾಕು—ಎಂದು ಕಾಯ್ದು ಕುಳಿತಳು. ಆದರೆ ಅವನಿಂದ ಅದರ ಕರೆಯೇ ಇಲ್ಲ. ಆದರೂ ಅವನು ಸಂತೋಷದಿಂದ್ದಾನಲ್ಲ— ಅದೇ ಸಾಕು, ಎಂದುಕೊಂಡು ಅವನನ್ನು ಮತ್ತೆ ಮತ್ತೆ ಓರೆಯಾಗಿ—ನೇರ ವಾಗಿ ನೋಡುತ್ತ ಕುಳಿತಳು.

"ನೀನು ಇತ್ತೀಚೆಗೆ ಸಿನೆಮಾ ನೋಡಲಿಲ್ಲ—ಅಲ್ಲವೇ ಕಮಲ ?"

"ಹೌದು ಪ್ರಭೆಯೇ ಇಲ್ಲವಲ್ಲ"—ಎಂದಳು.

"ಅವಳೇ ಆಗಬೇಕೇನು, ಸಿನೆಮಾ ನೋಡಲು—"

"ಹಾಗೇನಿಲ್ಲ—ಅವಳಾದರೆ ಅದು—ಇದು ಎಂದು ಹೇಳುತ್ತ ಆರಿಸಿ ಕರೆದೊಯ್ಯುತ್ತಿದ್ದಳು."

"ಇಂದು ಮಳೆಯೂ ಇಲ್ಲ."

"ಹೌದು; ಹೋಗೋಣವೇ ?"

"ಎಲ್ಲಿಗೆ—ಸಿನೆಮಾಕ್ಕೇ ? ಯಾವುದಕ್ಕೆ ?"

"ಯಾವುದಾದರೊಂದಕ್ಕೆ—ನನಗೆಲ್ಲವೂ ಅಷ್ಟೆ."

"ನನಗೆ ಈ ಚಿತ್ರಗಳೆಂದರೆ ಬೇಸರ. ನಿನ್ನನ್ನು ಬೇಕಾದರೆ ಕಳಿಸಿ ಬರುತ್ತೇನೆ."

"ನೀವು ?"

"ನಾನು ವಾಕಿಂಗ್ ಹೋಗಿಬರುತ್ತೇನೆ. ಬಿಡುವ ಸಮಯ ನಿನ್ನನ್ನು ಕರೆಯುಬರುತ್ತೇನೆ."

"ನಾನೊಬ್ಬಳೇ ಯಾಕೆ ಹೋಗಬೇಕು ?"

"ಬಿಡು—ಹೋಗಬೇಕೆಂದರೆ ಹೋಗು; ಅಷ್ಟೆ. ಇನ್ನು ನಿನಗಾಗಿ ಅಲ್ಲಿಗೆ ಬಂದು ಆ ಸುಳ್ಳು ಕಥೆಗಳನ್ನು ನೋಡಲಾರೆ."

"ನನಗಾವರೂ ಎಲ್ಲಿ ಬೇಕಾಗಿದೆ ? ಪ್ರಭಾ ಇದ್ದರೆ ಅದೇ ಸತ್ಯಕಥೆ

ಯೆಂದು ಹೇಳುತ್ತಿದ್ದಳು. ಪಾತ್ರಗಳ ಪರಿಚಯವೆಲ್ಲ ಅವಳಿಗಿತ್ತು."

"ನಿನಗೊಬ್ಬರು ಗೈಡ್ ಬೇಕಾಯಿತು ಹಾಗಾದರೆ, ಕುಸುಮಕ್ಕ ಬರುತ್ತಾರೋ—ನೋಡು."

"ಛೇ ! ಅವರೇನು ಬಂದಾರು ? ಚಿತ್ರಾಗೆ ಮೈ ಬಿಸಿಯಾಗಿದೆ."

"ಹಾಗೇನು ? ಏನಾಗಿದೆ ?"

"ಏನಿಲ್ಲ; ಬರೀ ನೆಗಡಿಯ ಜಡ್ಡಿರಬೇಕು."

"ಇನ್ನು ನೀನು ಬಾ—ಎಂದರೆ ನನಗೆ ನಿರ್ವಾಹವಿಲ್ಲ"

"ಯಾಕೆ—ಆ ಹಾಳು ಸಿನೇಮಾ ? ನನಗಾದರೂ ಎಲ್ಲಿ ಬೇಕಾಗಿದೆ. ನೀವು ಕರೆದರೆ ನಾನೂ ವಾಕಿಂಗ್ ಬಂದೇನು."

"ಬಂಗಾರವಾಯಿತು ರಾಣೀ—ಹೊರಡು. ಮಳೆಯೂ ಇಲ್ಲ."

"ಏಳಿರಿ—" ಎಂದಳು.

"ಏನು ? ಹೀಗೇ ಬರುವವಳೇ ?"

"ಅಲಂಕಾರವಾಗಬೇಕೇನು ?"

"ಹೂಂ—ಮತ್ತೆ. ನನ್ನೊಡನೆ ಅಪೂರ್ವಕ್ಕೆ ಬರುತ್ತೀಯೆಂದ ಮೇಲೆ!"

ಅವಳಿಗೆ ಇದ್ದುದೇ ಸಾಕಾಗಿತ್ತು. ಪತಿಯ ಆಸೆಗೆ ಅಡ್ಡಬರಬಾರದೆಂದು–

"ಯಾವ ಸೀರೆ ಉಡಲಿ ?" ಎಂದಳು.

"ಆ ದಾಳಿಂಬ ಉಡು."

"ನಿಮಗೆ ನೀಲಿಯದೇ ಪ್ರೀತಿ–ಎನ್ನುತ್ತಿದ್ದಿರಿ."

"ಇಂದು ಅದು ಬೇಡ; ದಾಳಿಂಬವೇ ಇರಲಿ."

"ಆಗಲಿ,—ಯಾವ ಜಂಪರು ?" ಎಂದಳು.

"ಕಡು ನೀಲಿ !"

ಗಂಡನ ರುಚಿ,—'ಆಗಲಿ' ಎಂದು ಹತ್ತು ನಿಮಿಷದಲ್ಲಿ ಸಿದ್ಧಳಾದಳು. ಬಿಡುಮುಡಿಯನ್ನು ಬಿಟ್ಟು, ತೆಳುವಾಗಿ ಹುಡಿ ಲೇಪಿಸಿಕೊಂಡು, ಹೊಳೆಯುವ ತಿಲಕವಿಟ್ಟು ಟೊಂಕಕ್ಕೆ ಬಿಳಿಯ ವಸ್ತ್ರ ಸಿಕ್ಕಿಸಿಕೊಂಡು "ಹೊರಡಿ" ಎಂದಳು.

ರತಿಯಂತೆ ಕಂಡ ಕಮಲೆ ನಗುತ್ತ ನಿಂತುದನ್ನು ನೋಡಿ,

"ನನ್ನ ದೇವಿಗೆ ಇನ್ನೇನು ಕಡಿಮೆಯಾಗಿದೆ ?" ಎಂದ ದಿನಕರ.

" ನೀವು ದೇವಿ-ಗೀವಿ ಎನ್ನಬೇಡಿ. "

" ಬಿಡು, ನನ್ನ ಕಮಲ "

" ಹಾಗೇ ಹೇಳಿ, ನನ್ನ ರಾಜ. "

ನಗುತ್ತ ದಿನಕರ " ಆ ಕಡೆ ತಿರುಗು ಕಮಲ " ಎಂದ.

" ಆಗಲಿ " ಎಂದು ಹೊರಳಿ ನಿಂತಳು.

ತನ್ನ ಜೇಬಿನಿಂದ ಮಲ್ಲಿಗೆಯ ಮೊಗ್ಗೆಯ ಮಾಲೆ ತೆಗೆದು ತಾನೇ ಕೈಯಾರೆ ಮುಡಿಸಿದ. ಹೂ ಗಮಗಮಿಸಿತು. ಅವಳನ್ನು ತಿರುಗಿಸಿಕೊಂಡು ಗದ್ದಕ್ಕೆ ಬೆರಳಿಟ್ಟು,

" ನನ್ನ ಕಮಲ " ಎಂದು ಬಾಗಿ ಮುತ್ತಿಟ್ಟ.

ಬಳುಕುವ ಕಮಲೆ ಬಿಡಿಸಿಕೊಂಡು ಪತಿಯನ್ನು ನೋಡಿದಳು. ಅವನು ಆಫೀಸಿನ ವೇಷದಲ್ಲೇ ಇದ್ದಾನೆ. ಅದು ಬೇಡವೆನಿಸಿತವಳಿಗೆ.

" ನಿಮಗೆ ಬೇಕಾದಂತೆ ನಾನು ಅಲಂಕರಿಸಿಕೊಂಡೆ. "

" ಹೌದು, ರಾಣಿ "

" ನೀವು ಈ ಆಫೀಸಿನ ವೇಷದಲ್ಲಿ ಹೊರಡಬೇಡಿ. "

" ಬಿಡು; ಏನಾಗಬೇಕು ಹೇಳು. "

ಕಮಲೆ ಅವಸರದಿಂದ ಓಡಿ, ಒಗೆದ ಬಟ್ಟೆಯ ಪೆಟ್ಟಿಗೆ ತೆಗೆದು ತೆಳ್ಳನೆಯ ಧೋತರ ತಂದಿತ್ತು, ದಿನಕರನ ಕೋಟು ಕಳೆದಳು. ಅವನು ಉಡುತ್ತಿರುವಾಗ ರೇಶಿಮೆಯ ನೆಹ್ರೂ ಅಂಗಿ ಮುಂದೆ ಮಾಡಿದಳು. ಅವನು ನಗುತ್ತ ಅದನ್ನು ಹಾಕಿಕೊಂಡ. ತಲೆಗೆ ತಾನೇ ಮಲ್ಲಿಗೆಯ ಎಣ್ಣೆ ಸವರಿ ಬಾಚಿದಳು.

ಅವಳ ಈ ರೀತಿ ದಿನಕರನಿಗೆ ಹೊಸದು. ಅವನ ಆಸೆ ಹಣ್ಣಾದಂತಾಗಿ ಉಬ್ಬಿ ಹೋದ.

" ಇನ್ನು ಹೊರಡೋಣವೇ "— ಎಂದ.

ಕೈಯಲ್ಲಿ ವಾಕಿಂಗ್‌ಸ್ಟಿಕ್ ಕೊಡುತ್ತ " ಈಗ ಹೊರಡಿ " ಎಂದಳು.

ದಿನಕರ ಬಾಗಿಲು ಮುಚ್ಚಿ ಕೀಲಿ ಹಾಕುವಾಗ ಕಮಲೆ ನಗುತ್ತ ನಿಂತ ಒಂದು ಗುಲಾಬಿಯನ್ನು ಕೊಯ್ದು ಅವನ ಕೈಗಿತ್ತಳು.

ಮೆಲ್ಲಗೆ ಹೆಜ್ಜೆ ಹಾಕಿದರು.

ಕುಸುಮ ಬಾಗಿಲಲ್ಲಿ ನಿಂತು ನೋಡುತ್ತಿದ್ದಳು. ಗೇಟಿನಲ್ಲಿದ್ದ ವಸಂತ "ಮಾಮಿ, ನಾನೂ ಬರ‍್ತೇನೆ" ಎಂದ.

ಕಮಲೆ ದಿನಕರನ ಒಪ್ಪಿಗೆಗೆ ನೋಡುವಾಗ ಕುಸುಮ ನಡೆದು ಬಂದು ತೃಪ್ತಿ ಹೊಂದಿದಂತೆ ನಗುತ್ತ—

"ಕಮಲಕ್ಕ, ಒಂದು ನಿಮಿಷ ಬಂದು ಹೋಗುತ್ತೀಯಾ ?" ಎಂದಳು.

ವಸಂತನ ಕೈಹಿಡಿದು ಅವಳು ತಿರುಗಿದಳು. ದಿನಕರ ನಿಂತಿದ್ದ. ಕುಸುಮ ಒಳಗೆ ಓಡಿಹೋಗಿ ಬಂದು

"ಒಳಗೆ ಬಾ ತಂಗಿ" ಎಂದಳು.

"ಅಕ್ಕ, ನನ್ನನ್ನು ಹೀಗೇ ಕರೆಯುವಿಯಾ ?"

"ಆಗಲಮ್ಮಾ" ಎನ್ನುತ್ತ ಕುಸುಮ ಒಂದು ಕಾಡಿಗೆಯ ಬೊಟ್ಟನ್ನು ಅವಳ ಗಲ್ಲಕ್ಕೆ ಸೋಂಕಿಸಿದಳು.

"ಏನಕ್ಕ ಇದು ?"

"ನನ್ನ ಲಕ್ಷ್ಮಿಗೆ ದೃಷ್ಟಿಯಾದೀತು—" ಎಂದು "ಹೋಗಿ ಬಾರಮ್ಮಾ, ಬರುವಾಗಲೂ ನನ್ನನ್ನು ಕಂಡು ಹೋಗು" ಎಂದು ವಸಂತನನ್ನು ಅವಳಿಂದ ಬಿಡಿಸಿಕೊಂಡಳು.

## ೧೫

ಮಾಳಮಡ್ಡಿಯ ತಮ್ಮ ಏರಿಯ ಮನೆಯಿಂದ ಹಾವಿನ ರಸ್ತೆಗುಂಟ ಇಳಿಯುತ್ತ ಕಮಲೆ, ದಿನಕರ ಅಡ್ಡ ದಾರಿ ಹಿಡಿದು ಸಾರಸ್ವತಪುರದ ಕಡೆಗೆ ತಿರುಗಿಕೊಂಡರು. ದಾರಿಯಲ್ಲಿ ಪ್ಲಾಟುಗಳಾಗಿ ಹಂಚಿದ ನೆಲ ತುಳಿಯುವಾಗ ಅಲ್ಲೊಂದು ಮನೆಯ ಜಾಗವನ್ನು ತಾನೂ ಕೊಳ್ಳಬೇಕಾಗಿತ್ತೆಂದು ದಿನಕರ ಚಿಂತಿಸಿ—"ಕಮಲ, ಈ ತಿಳ್ಳಿಯ ಮನೆಗಳಂತೆ ಸುಣ್ಣ ಸುರುವಿದ ಈ ಗೆರೆಗಳೇನು ಗೊತ್ತೇ ?" ಎಂದ.

ತಗ್ಗು-ತೆವರುಗಳಲ್ಲಿ ಏಳುತ್ತ ಬೀಳುತ್ತ ಇವನನ್ನು ಹಿಂಬಾಲಿಸಿದ ಕಮಲೆ ನನ್ನನ್ನು ಗಂಡ ಎಂಥ ದಾರಿಗೆ ಎಳೆದು ತಂದನಲ್ಲ— ಎಂದು

ತೇಕುತ್ತಿದ್ದಳು.ನನ್ನನ್ನು ಇವರು ಹೀಗೇ ಅನಿರ್ದಿಷ್ಟವಾದ ತಮ್ಮ ಹುಚ್ಚಿಗೆಳೆಯು ತ್ತಿದ್ದಾರೆ ಎಂದುಕೊಂಡಳು. ಅವಳಿಗೂ ಈಗ ತನ್ನ-ಅವನ ಜೀವನ ಪಥದ ಚಿಂತೆ ತೊಡಗಿದೆ. ಪಥವಾವುದು—ಗುರಿಯಾವುದೆಂಬುದನ್ನರಿಯದ ಪಥಿಕ ಳವಳು. ಸೀತಾ ವನವಾಸ ಅವಳಿಗೆ ನೆನಪಾಯಿತು. ಹೊರಟಾಗ ಅವರಿಗೆ ಹದಿ ನಾಲ್ಕು ವರುಷದ ಕಾಲಹರಣವೊಂದೇ ಗುರಿಯಾಗಿರಬೇಕು. ರಾಮಚಂದ್ರನಿ ಗಾದರೂ ಅದಕ್ಕೂ ಹೆಚ್ಚಿನ ಉದ್ದೇಶವಿತ್ತೆಂದು ಅವಳಿಗೆ ತಿಳಿಯದು. ಆದರೆ ತನ್ನದು ಎಷ್ಟು ದಿನದ ವನವಾಸ ? ವನವೆಂದರೆ ಅವರು ಸುತ್ತಿದ ಕಾನನವಲ್ಲ. ಆದರೆ ದಿನಕರನ ಜತೆಯಲ್ಲಿ ದಾರಿಯಿಲ್ಲದ—ಗುರಿಯಿಲ್ಲದ ಈ ನಡೆ ಅವಳಿಗೆ ಶಾಸನವಲ್ಲದೆ ಮತ್ತೇನು—ಎನಿಸಿತು.

ಬಯಲಿನಂತಿದ್ದ ಆ ಸ್ಥಳದಲ್ಲಿ ನಿಂತು ಪತಿ ಕೇಳಿದ ಪ್ರಶ್ನೆಗೆ ಉತ್ತರ ವಾಗಿ—

"ಇದಾವುದೋ ಆಟದ ಬಯಲಿರಬೇಕು" ಎಂದಳು.

ಬೆಳಗಾವಿಯಲ್ಲಿಯ ಕ್ರಿಕೆಟ್ ಆಟದ ಬಯಲನ್ನವಳು ದೂರದಿಂದ ನೋಡಿದ್ದಳು. ದಿನಕರನೇ ಅವಳನ್ನು ಸುಮ್ಮನೆ ಸುತ್ತಾಟಕ್ಕೆ ಕರೆದೊಯ್ದು ಆ ಬಯಲನ್ನು ತೋರಿಸಿದ್ದ. ಇಲ್ಲಿ ಗೆರೆಗಳು ಬಹಳ ಕಂಡವಾಗಲಿ, ಉದ್ದೇಶ ಅವಳಿಗೆ ಬೇರೆಯಾಗಿ ಕಾಣಲಿಲ್ಲ.

"ಹುಚ್ಚಿಯೆಂದರೆ ನೀನೇ ನೋಡು, ಕಮಲ."

"ಇರಲೊಲ್ಲದೇಕೆ. ನಾನು ಹುಚ್ಚಿಯೇ ಆಗಿರುತ್ತೇನೆ. ನೀವು ಜಾಣರೇ. ಈ ಹುಚ್ಚಿಯ ಕೈಯೇಕೆ ಹಿಡಿದಿರಿ ?"

ಪತಿಯನ್ನೇ ನೋಡುತ್ತಿದ್ದು ಕಾಲಲ್ಲಿ ನೋಡದೆ ಎಡವಿ ಬೀಳುತ್ತಿದ್ದ ವಳನ್ನು ಎತ್ತಿ ಹಿಡಿದು ದಿನಕರನೆಂದ:

"ನಾನು ಜಾಣನೆಂದು ನಿನಗಾರು ಹೇಳಿದರು ?"

"ಅಪ್ಪ."

"ಅವರಿಗೂ ಹುಚ್ಚೇ ಹಿಡಿದಿರಬೇಕು."

"ಯಾಕೆ—ನೀವು ನನಗೆ ಬೇಕಾದ್ದು ಅನ್ನಿರಿ. ಅವನ ಗೊಡವೆ ಏಕೆ ?"

"ಅಷ್ಟು ದಿನ ಯಾವ ಜಾಣನೂ ನನಗೆ ಕನ್ನೆಯನ್ನು ಕೊಡಲು ಮುಂದೆ ಬಂದಿದ್ದಿಲ್ಲ."

" ಅವರೇ ಹುಚ್ಚರು.''

" ಬೆಳಗಾವಿಯಲ್ಲಿ ಹುಚ್ಚರ ಆಸ್ಪತ್ರೆಯಿಲ್ಲ ಕಮಲ."

" ಧಾರವಾಡದಲ್ಲಿ ?"

" ಇದೆಯೆಂದೇ ನನ್ನನ್ನು ಇಲ್ಲಿಗೆ ವರ್ಗ ಮಾಡಿದ್ದಾರೆ."

" ಸಾಕು; ಹುಚ್ಚುಚ್ಚು ಮಾತು. ಬೇರೆ ಮಾತಿಲ್ಲವೇನು ಈ ಹೊತ್ತು?"

" ಇರಲಿ ಬಿಡು; ಈ ಬಯಲಿದೆಯಲ್ಲ—ಇದು ಮನೆಗಳನ್ನು ಕಟ್ಟಿಸಲೆಂದು ಮಾಡಿದ ಜಾಗ. ಇಲ್ಲಿ ಗೆರೆ ಕೊರೆದಿದ್ದಾರಲ್ಲ! ಅದೆಲ್ಲ—ಒಂದೊಂದು ಮನೆಗೆಂದು ಗುರುತು ಹಾಕಿದ್ದು. ಈ ನೇರದ ಗೆರೆಗಳಿವೆಯಲ್ಲ—ಇದು ರಸ್ತೆ."

" ಇದು ಯಾರ ಮನೆಗೆಂದು ಮಾಡಿದ್ದು ?''

" ನನ್ನಂಥ ಬಡವರಿಗಲ್ಲ—ಕಮಲ, ಈ ಜಾಗ. ಎಲ್ಲ ಶ್ರೀಮಂತರಿಗಾಗಿ ಇರುವ ನೆಲವಿದು."

" ಯಾಕೆ ನಿಮಗೆ ಬಡತನದ ಚಿಂತೆ ?"

" ಬಡತನವಿದ್ದಾಗ ಚಿಂತೆ ಮಾಡದಿದ್ದರಾಗುತ್ತದೆಯೇ ?''

" ಚಿಂತೆ ಮಾಡಿದರೆ ಬಡತನ ಹೋಗುತ್ತದೇನು ?"

" ಸರಿಯಾದ ಮಾರ್ಗದಲ್ಲಿ ಚಿಂತೆ ಮಾಡಿದರೆ ಹೋದೀತು. ಇವರೆಲ್ಲ ಆ ಬಗೆಯ ಚಿಂತೆ ಹತ್ತಿ ಹಣ ಗಳಿಸಿದರು; ಈ ನೆಲ ಕೊಂಡರು. ಮುಂದಿನ ವರುಷಕ್ಕೆ ನೋಡು—ಇಲ್ಲಿ ಮನೆಗಳೇಳುತ್ತವೆ.''

" ಏಳಲೊಲ್ಲವೇಕೆ. ಚಿಂತೆ ಹತ್ತಿಸಿಕೊಂಡ ಶ್ರೀಮಂತಿಕೆ ನಿಮಗೆ ಬೇಡ."

" ನಿನಗೆ ?"

" ನನಗೇನು ಚಿಂತೆ ? ಇದ್ದುದೊಂದೇ ಚಿಂತೆ; ಅದೂ ಸಿರಿತನದ್ದೇ.''

" ಅದೇನು ?"

" ನಿಮ್ಮದು "—'ನೀವೇ ನನ್ನ ಚಿರಂತನವಾದ ಚಿಂತೆ'ಯೆಂಬಂತೆ ದಿನಕರನನ್ನು ನೋಡಿದಳು.

ಒಳ್ಳೆಯ ಹುಡುಗಿ ಕಮಲ! ಅವಳಿಗೀಗ ತನ್ನ ಚಿಂತೆ ತೊಡಗಿದೆಯೆಂಬುದರಲ್ಲಿ ದಿನಕರನಿಗೆ ಸಂಶಯ ಉಳಿಯಲಿಲ್ಲ. ಅದೇ ಅವಳ ಸೌಭಾಗ್ಯವೆಂಬಂತಿದ್ದಾಳೆ. ಅವಳಲ್ಲಿ ಈಗ ಬದಲಾವಣೆಯಾಗಿದೆಯಲ್ಲವೇ ? ಹೌದು;

ಆಗಿದೆ. ತವರಿನಿಂದ ಬಂದಮೇಲೆ ತನ್ನ ಆಸೆಯ ಹೂವಾಗಿದ್ದಾಳೆ. ಮುಂಚೆ ಹೀಗಿದ್ದಳೇ ? ಮುಂಚೆಯೆಂದರೇನು—ಒಂದು ತಿಂಗಳ ಮುಂಚೆ ಅವಳು ಹೀಗೇ ಇದ್ದಳಲ್ಲ,—ಆಗ ತನ್ನ ತಾಳಕ್ಕೆ ಹೀಗೆ ಕುಣಿಯಲಿಲ್ಲವಲ್ಲ ! ಪ್ರಭೆ ಹೋದಮೇಲೆ ಅವಳ ಜಾಗೆಯನ್ನು ತುಂಬಿಕೊಂಡಿದ್ದಾಳೆ. ತನ್ನದೇ ಆಗ ಬೇತಾಳವಾಗಿರಲಾರದೇಕೆ ? ಎಂದು ಚಿಂತಿಸುತ್ತ,

"ನಮಗೆ ಇಲ್ಲೊಂದು ಮನೆಯಾಗಬೇಕು—ಕಮಲ." ಎಂದ.

"ಮೊದಲು ಊಲನ್ ಸೂಟಾಗಬೇಕಲ್ಲವೇ ನಿಮಗೆ ?" ಎಂದು ನಕ್ಕಳು ಕಮಲ.

* * * *

ಕಲಘಟಗಿ ರಸ್ತೆಗೆ ಕೂಡಿಕೊಂಡು, ಸಾರಸ್ವತಪುರವನ್ನು ಬಲಗೊಂಡು ಮುಂದೆ ಸಾಗಿದರು. ಎಡಕ್ಕೆ ಒಂದು ಸಣ್ಣ ಕೆರೆ. ಅದನ್ನು ದಾಟಿ ಸ್ವಲ್ಪ ಎತ್ತರವಾದ ದಿಬ್ಬ. ಅದೂ ಒಂದೊಮ್ಮೆ ದಿನಕರನ ತಪಸ್ಸಿನ ಸ್ಥಳವಾಗಿತ್ತು. ಕಮಲೆಯ ಕೈಹಿಡಿವುದೆಂದು ನಿಶ್ಚಯವಾಗಿ ಅದೇ ಧಾರವಾಡಕ್ಕೆ ಬಂದ ದಿನ ಕರ ಹುಬ್ಬಳ್ಳಿ ರಸ್ತೆಯಿಂದ ಹೊರಳಿ ಈ ದಿಬ್ಬಕ್ಕೆ ಬಂದು ಕೂಡುತ್ತಿದ್ದ. ಒಂದು ದಿನ ದಂಪತಿಗಳಿಬ್ಬರು ಆ ಸ್ಥಳದಲ್ಲಿ ಎಡೆಯಾಡಿ ಹೋದುದನ್ನು ಕಣ್ಣಿಟ್ಟು ನೋಡಿ ಕಮಲೆ ಬಂದಾಗ ತಾನೂ ಹೀಗೇ ಅವಳನ್ನು ಕಟ್ಟಿಕೊಂಡು ತಿರುಗಾಡಿಯೇನೇ—ಎನಿಸಿತ್ತು. ಆಗ ತನಗಾದಂತೆ ಇನ್ನೊಂದು ಒಂಟಿ ಜೀವಕ್ಕೆ ದಾಂಪತ್ಯ ಜೀವನದ ಹಸಿವು-ನೀರಡಿಕೆಗಳು ಕಾಡಿಯಾವು ಎಂದು ಕೊಂಡಿದ್ದ.

ಅಂದಿನ ತನ್ನ ಕನಸಿನ ಕಮಲೆಯನ್ನು ಇಂದು ಕರೆದುಕೊಂಡೇ ಹೊರಟಿದ್ದಾನೆ. ಈಗವನಿಗೆ ಅತ್ತಿಕೊಳ್ಳ ಸೆಳೆಯುತ್ತಿದೆ. ಅಲ್ಲಿಗೆ ಕಮಲೆ ಯನ್ನೂ ಎಳೆದುಕೊಂಡು ಹೋಗಿ ತನ್ನ ಮನಸ್ಸಿನ ಕುದಿಯನ್ನವಳಿಗೆ ಹಂಚ ಬೇಕೆಂದು ನೆನಸುತ್ತಾನೆ. ಪಾಪ; ನಿಷ್ಪಾಪ-ನಿಶ್ಚಿಂತ ಜೀವಕ್ಕೆ ಯಾಕೆ ಆ ಬಿಸಿ ತಗಲಬೇಕು—ಎಂದೂ ಅಂದುಕೊಳ್ಳುತ್ತಾನೆ.

ಹೌದು. ಕಮಲೆಗೆ ಯಾವ ಚಿಂತೆ? ತನ್ನದೇ ತಾನೆ ! 'ನಾತಿ ಚರಾಮಿ' ಎಂದು ಕೈಹಿಡಿದ ಅವಳನ್ನು ಮನಸ್ಸಿನ ಹುಚ್ಚಿನಿಂದ ಬೇರ್ಪಡಿಸುವದು ಅವ ನಿಗೆ ಸಮ್ಮತವಿಲ್ಲ. ಆದರೆ ಅವಳ ಎಡೆಯನ್ನು ಮುಂಚೆ ಒಂದು ಜೀವ

ಮುಟ್ಟಿ ಎಂಜಲ ಮಾಡಿದ್ದನ್ನು ಇಂದು ಅವಳಿಗೆ ಹೇಳಬೇಕೇ—ಕೂಡದೇ ಎಂಬುದೇ ಅವನ ಸಮಸ್ಯೆ.

ರೇಲ್ವೆ ಪೂಲನ್ನು ದಾಟಿದರು. ಸೋಮೇಶ್ವರ ಕಾಣುತ್ತಿತ್ತು. ದಿನಕರ ಹಾದಿಬಿಟ್ಟು ಬಲಕ್ಕೊಲಿದುದನ್ನು ಕಂಡ ಕಮಲೆ ಮತ್ತೆ ಅಡವಿ ಬೀಳಲಾರದೆ "ಅಲ್ಲಿ ಕಾಣುವ ಗುಡಿಯಾವುದು ?" ಎಂದು ಕೇಳಿದಳು.

"ಅದು ಸೋಮೇಶ್ವರ. ಅಲ್ಲಿ ಶಾಲ್ಮಲಾ ನದಿ ಉಗಮವಾಗಿದೆ."

"ಅಲ್ಲಿಗೆ ಹೋಗೋಣ—"

"ಈಗ ಬೇಡ; ಇನ್ನೊಮ್ಮೆ ಏನಾದರೂ ಕಟ್ಟಿಕೊಂಡು ಹೋಗೋಣ."

"ಈಗ ನನ್ನನ್ನು ಕಟ್ಟಿಕೊಂಡಿದ್ದೀರಲ್ಲ—ಹೋದರಾಯಿತು."

"ಬೇಡ ಕಮಲ; ನದಿ ಉಗಮ, ಮಹಾಪುರುಷರ ಉಗಮ ನೋಡ ಬಾರದಂತೆ."

ಹೀಗೆ ಹೇಳುವ ದಿನಕರ ಮಹಾಪುರುಷನಂತೇ ಕಂಡ ಕಮಲೆಗೆ. ಅವನು ತನ್ನ ಚಿಂತೆಯ ಮೂಲವನ್ನೇ ತೋರಲು ಹೊರಟದ್ದನ್ನು ಅವಳೇನು ಬಲ್ಲಳು ?

ದಿನಕರನನ್ನು ಹಿಂಬಾಲಿಸಿದಳು. ಅವನು ಆ ಕಾಡನ್ನು ತುಳಿಯುತ್ತ ಏನೋ ಕಳೆದುಕೊಂಡವನಂತೆ ಅವಸರಪಡಿಸತೊಡಗಿದ.

"ನನಗೆ ನಿಮ್ಮ ಕೂಡ ಓಡುವದಾಗದು. ಇಲ್ಲಿ ಸ್ವಲ್ಪ ಕೂತು ಕೊಳ್ಳೋಣ."

"ಇಲ್ಲಿ ಬೇಡ ಕಮಲ, ಸ್ವಲ್ಪ ಮುಂದೆ ಬಾ—ನನ್ನ ರಾಣಿ. ನನ್ನ ಪ್ರೀತಿಯ ಸ್ಥಳಕ್ಕೆ ಕರೆದೊಯ್ಯುತ್ತೇನೆ."

ತಾನಲ್ಲದೆ ಇನ್ನೊಂದು ಪ್ರೀತಿಯ ಸ್ಥಳವಿದೆಯೋ ತನ್ನ ಪತಿಗೆ—ಎಂಬು ದನ್ನು ಕಮಲೆ ಹೇಗೆ ತಿಳಿದಾಳು ?

"ಪ್ರೀತಿಯ ಸ್ಥಳವಂತೆ ! ಸ್ಥಳದ್ದೇನು ಪ್ರೀತಿ ? ಈ ನೆಲಕ್ಕೇನಾಗಿದೆ ?"

ಹೌದು; ಆ ನೆಲವೂ ನೆಲವೇ. ಕಮಲೆ ನಿಂತ ಸ್ಥಳ ಪ್ರೀತಿಯ ಸ್ಥಳ ವೇಕಲ್ಲ? ಆದರೆ ಕಮಲೆ ತನ್ನನ್ನು 'ಆ' ಪ್ರೀತಿಯ ಸ್ಥಳದಿಂದ ದೂರವಿರಿಸ ಬಯಸುತ್ತಾಳಲ್ಲ—ಎಂದುಕೊಂಡ ದಿನಕರ. ಅವಳು ಹಾಗೆ ಮಾಡುವದೇ ಅವಳ ಧರ್ಮವಲ್ಲವೇ ? ತನ್ನ ಧರ್ಮವೊಂದು ಬೇರೆಯಾಗಿದೆಯೋ ?

ಹಾಗಾಗಬಾರದು. ಧರ್ಮವೆಂಬುದು ಇಬ್ಬರಿಗೂ ಒಂದೇ. ಆದರೆ ಕರ್ಮ ಫಲವನ್ನು ಹೇಗೆ ಹಂಚಿಕೊಳ್ಳಬೇಕು ?

" ಆಗಲಿ." ಎಂದು ದಿನಕರ ಅಲ್ಲಿಯೇ ಕುಳಿತ.

ಕಮಲೆಯೂ ನೆಲ ನೋಡಿ ತಾನು ಕೂಡುವದಕ್ಕೆ ಒಂದು ಹುಲ್ಲು ಗಡ್ಡೆಯನ್ನು ಆರಿಸಿಕೊಂಡು ಕೂಡುತ್ತ " ಇಲ್ಲಿ ಬನ್ನಿ. ಅಲ್ಲಿ ಕೆಂಪು ನೆಲದಲ್ಲಿ ಧೋತರ ಕಾವಿಯಾದೀತು "—ಎಂದಳು.

" ಆಗಲೇಳು ನಾನೊಬ್ಬ ಸ್ವಾಮಿಯಾಗುತ್ತೇನೆ."

" ನಾನು ?" ಎಂದಳು.

" ನೀನೊಬ್ಬ ಶರಣಮ್ಮ."

* *

ದಿನಕರ ಅಸ್ವಸ್ಥನಾದಂತೆ ಕಂಡ. ಕಮಲೆ ಸುತ್ತಲ ಬಯಲನ್ನು, ದಿಬ್ಬ-ಕೊಳ್ಳಗಳನ್ನು ನೋಡುತ್ತಿದ್ದಳು. ಊರಲ್ಲಿಯೇ ತಿರುಗಾಡಿ, ಅಂಗಡಿ ಬೀದಿಯನ್ನಷ್ಟೇ ನೋಡಿದ ಅವಳಿಗೆ ಆ ಸ್ಥಳ ಪ್ರಶಾಂತವಾಗಿ ಕಂಡಿತು. ಈ ತಿರುಗಾಟದಲ್ಲಿಯೂ ಆನಂದವಿದೆಯೆಂದು ಅವಳು ಪ್ರಥಮತಃ ಕಂಡುಕೊಂಡಳು. ಪತಿ ಕರೆದಾಗ ಇಂಥಲ್ಲಿ ತಪ್ಪದೇ ಬರಬೇಕು ಎಂದುಕೊಂಡು—

" ಎಷ್ಟು ಚಂದವಾಗಿದೆ ಈ ಸ್ಥಳ ?" ಎಂದಳು.

ದಿನಕರ ವಿಚಾರ ಚಕ್ರದಲ್ಲಿ ಸಿಕ್ಕಿಕೊಂಡವನು ಅಲ್ಲಿಂದಲೇ ಉಸುರಿದ:

" ಯಾವ ಸ್ಥಳ ಕಮಲ ?"

" ಇದು; ನಾವು ಕೂತದ್ದು. ಇದು ನನ್ನ ಪ್ರೀತಿಯ ಸ್ಥಳ."

" ಸ್ವಲ್ಪ ಮುಂದೆ ಬರಲಿಲ್ಲ ನೀನು. ನನ್ನ ಸ್ಥಳ ಇದಕ್ಕೂ ಚೆಂದವಾಗಿದೆ."

" ಹೆಂಗಸರು ಬಹಳ ಮುಂದೆ ಬರಬಾರದು. ನನಗಿಷ್ಟೆ ಸಾಕು."

" ಯಾಕೆ ಹಿಂಜರಿಯುವಿ ಕಮಲ ?" ಎಂದು ಏನೂ ಅರಿಯದ ಅವಳಲ್ಲಿ ಸಂಶಯಿತನಾಗಿ ನುಡಿದ ದಿನಕರ.

" ಎಲ್ಲಿ ಹಿಂಜರಿದಿದ್ದೇನೆ ? ನೀವು ಕರೆದಲ್ಲಿ ಬಂದಿಲ್ಲವೇ ?"

" ಸ್ವಲ್ಪ ಮುಂದೆ ಹೋಗೋಣವೇ ?"

" ಇಂದು ಬೇಡ; ನಾಳೆ. ಒಂದೇಸಲ ಮುನ್ನುಗ್ಗಬಾರದು."

"ಆಗಲಮ್ಮಾ" ಎಂದು ಬೇಸತ್ತವನಂತೆ ದಿನಕರ ಅಲ್ಲೇ ನೆಲದಲ್ಲಿ ಒರಗಲು ಬಾಗಿದ.

"ಛೀ, ಇಲ್ಲೇಕೆ ಮಲಗುತ್ತೀರಿ ? ಬಟ್ಟೆ ಕೊಳೆಯಾಗುವದಿಲ್ಲವೆ ?" ಎಂದು ಅವನನ್ನು ತನ್ನ ಕಡೆಗೆ ಎಳೆದುಕೊಂಡಳು.

ದಿನಕರ ಅವಳ ತೊಡೆಯ ಮೇಲೆ ತಲೆಯಿಟ್ಟು ಮಲಗಿಕೊಂಡು,

"ಕೊಳೆ-ಗಿಳೆ ಎಲ್ಲ ಮನೆಯಲ್ಲಿ—ಕಮಲ" ಎಂದ.

"ಯಾಕೆ ಹೀಗೆ ಹೇಳುವಿ, ನನ್ನ ರಾಜ ? ನಮ್ಮ ಮನೆಯಲ್ಲಿ ಏನು ಕೊಳೆಯಿದೆಯೆಂದು ಹೀಗೆ ಹೇಳುತ್ತೀರಿ ?"

"ಅದಲ್ಲವೇ ನಾನು ಹೇಳಿದ್ದು. ಮನೆಯಲ್ಲಿ ಹೀಗೆ ನೆಲದ ಮೇಲೆ ಕೂಡುತ್ತೇವೆಯೇ ?"

"ಇರಲಿ—ಬಿಡಿರಿ." ಎಂದು ಅವನ ಹಣೆಯ ಮೇಲೆ ಸರಿದುಕೊಂಡ ಕೂದಲಗಳನ್ನು ತಿದ್ದುತ್ತ ಕಮಲೆ ಅವನನ್ನೇ ನೋಡಿ,

"ಇಂದೇಕೋ ನೀವು ಸರಿಯಾಗಿಲ್ಲ" ಎಂದಳು.

"ಇದ್ದೇನಲ್ಲ; ಯಾಕೆ ?"

"ನನ್ನ ಮೇಲೆ ಸಿಟ್ಟಿಗೇಳಬೇಡ, ನನ್ನ ರಾಜ."

"ಇಲ್ಲ, ನನ್ನ ರಾಣಿ. ನೀನೂ ನನ್ನ ಮೇಲೆ ಕೋಪಮಾಡಿಕೊಳ್ಳುವದಿಲ್ಲವಷ್ಟೆ."

"ನಾನೇಕೆ ಕೋಪಗೊಳ್ಳಬೇಕು ?"

"ನಾನು ಏನೆಂದರೂ— "

"ಅಂಥದನ್ನು ನೀವೇನೆಂದಿದ್ದೀರಿ ?"

"ಮುಂದೆ...."

"ಹಾಗೇನೂ ಅನ್ನಬೇಡಿರಿ."

"ಒಮ್ಮೆ ಏನಾದರೂ ನಿನಗೆ ಒಪ್ಪದ್ದನ್ನು ಆಡಿದೆನೆಂದು ತಿಳಿ."

"ಸುಮ್ಮನೆ ಯಾಕೆ ತಿಳಿಯಲಿ ?"

"ಅದೆಲ್ಲ ಇರಲಿ; ಆಡಿದೆನೆಂದರೆ !"

"ಆಡು ನನ್ನ ರಾಜ; ಒಂದಲ್ಲ ಹತ್ತು ಮಾತಾಡು. ನಾನು ಏನೂ ನಿನಗೆ ಪ್ರತಿಯಾಡುವದಿಲ್ಲ."

“ ಆಡುವದಲ್ಲ.”

“ ಪ್ರತಿ ಮಾಡುವದಿಲ್ಲ. ”

“ ಮಾಡುವದೂ ಅಲ್ಲ; ಕ್ಷಮಿಸಬೇಕು. ”

“ ನನಗೆ ನೀವು ಹಾಗೆ ಕೇಳಬಾರದು.” ಎನ್ನುತ್ತ ಹಾಗೆಂದ ಬಾಯಿಗೆ ತುಟಿ ಸೋಂಕಿಸಿದಳು.

ಆಕಾಶವನ್ನೇ ನೋಡುತ್ತಿದ್ದ ದಿನಕರ ಕಮಲೆಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿ—

“ ನಕ್ಷತ್ರ ! ” ಎಂದ.

“ ಎಲ್ಲಿ ನಕ್ಷತ್ರ ? ಕತ್ತಲಾಗಿದೆಯಲ್ಲವೆ ” ಎಂದು ಕಮಲೆ ಮೇಲೆ ನೋಡಿದಳು.

“ಬೆಳಕು ಚೆಲ್ಲಿತು! ಇಲ್ಲಿ ಈ ನಕ್ಷತ್ರಗಳು....” ಎಂದು ಏಳುತ್ತ ಅವಳ ಎರಡೂ ಕಣ್ಣುಗಳಿಗೆ ಮುತ್ತಿಟ್ಟ.

“ ಸಾಕು; ಇನ್ನು ಹೊರಡೋಣ ” ಎಂದು ಮೇಲಕ್ಕೆದ್ದಳು ಕಮಲೆ.

ದಿನಕರ ಅವಳ ಕೈಯಾಸರದಿಂದೆದ್ದು ಕಾಲು ಹಾಕಿದ.

## ೧೬

ತಮ್ಮ ಪ್ರವಾಸ ಮುಗಿಸಿಕೊಂಡು ಸೀತಾರಾಮರಾಯರು ಮನೆಗೆ ಬರುವಾಗ ಮುಚ್ಚಂಜೆಯಾಗಿತ್ತು. ಮಕ್ಕಳನ್ನು ನೆಪಕ್ಕೆ ಮಾತಾಡಿಸಿ ಒಳಗೆ ಇದ್ದ ಕುಸುಮೆಯನ್ನು ಕರೆದು “ ಕಮಲಾಬಾಯಿ ಕಾಣುವದಿಲ್ಲವಲ್ಲ”—ಎಂದರು. ಕೆಲಸದಲ್ಲಿದ್ದ ಕುಸುಮೆ ಅಲ್ಲಿಂದಲೇ “ ಇಂದಾದರೂ ಮನೆ ನೆನಪಾಯಿತಲ್ಲ” ಎಂದು ಉತ್ತರಿಸುತ್ತ ಅವರನ್ನು ಸ್ವಾಗತಿಸಿದಳು.

“ ಯಾಕೆ ? ನಿನ್ನೆ ಬೆಳಗಾವಿ ಮುಕ್ಕಾಂ ಮಾಡಿದ್ದೆ. ವೆಂಕಟರಾಯರು ಸಿಕ್ಕಿದ್ದರು ” ಎಂದು ಸೀತಾರಾಮರಾಯರು ತಮ್ಮ ಪ್ರವಾಸ ವೃತ್ತಾಂತದ ಸುರುಳಿ ಬಿಚ್ಚಿದರು.

ಕುಸುಮೆ ತಕರಾರಿನ ಮನೋಭಾವ ಬಿಟ್ಟು ಒಳಗಿನಿಂದ ಒಂದು ಕಪ್ಪು ಚಹಾ ಹಿಡಿದುಕೊಂಡು ಬಂದು ಪತಿಗೆ ಕೊಡುತ್ತ—

" ಯಾರು ಕಮಲೆಯ ತಂದೆಯೇ ? " ಎಂದು ಕೇಳಿದಳು.

" ಹೌದು; ಪಾಪದ ಮುದುಕ. ಪೇಟೆಯಲ್ಲಿ ಕಂಡವರು ಮನೆಗೇ ಎಳೆದುಕೊಂಡು ಹೋಗಿ ಬೇಡವೆಂದರೂ ಸಂಜೆಗೆ ತಾವೇ ಅಡಿಗೆ ಮಾಡಿ ಬೀಗತನ ಮಾಡಿಸಿದರು. "

" ನಿಮಗೇಕೆ ಬೀಗತನ ? "

" ನಾವು ದಿನಕರನ ಕಡೆಯುವರಂತೆ; ಆದ್ದರಿಂದ ಬೀಗರಂತೆ. "

" ನಾನಂತೂ ಕಮಲೆಯ ಕಡೆಯುವಳು. "

" ಕಮಲೆಯೇ ಗಂಡಿನ ಕಡೆಯುವಳಾದಳು; ನೀನು ಬೀಗಿತ್ತಿಯಾದಿ. ಪಾಪ; ವೆಂಕಟರಾಯರು ಮಾತ್ರ ಹೆಣ್ಣಿನ ತಂದೆ ! "

" ಇರಲಿ; ಏನೆಂದರು ? ಅವರು ಹೇಗಿದ್ದಾರೆ ? ಕಮಲೆ ಸದಾ ಅವರು ಒಂಟಿಯಾದರೆಂದು ಕೊರಗುತ್ತಾಳೆ. ಅವರಿಗೆ ಈಗ ಗುಣವಾಗಿದೆಯೆ ? "

" ಅಡ್ಡಿಯಿಲ್ಲ; ಮುದುಕ ಚಟುವಟಿಕೆ ತೋರಿದರು. ದಿನಕರನನ್ನು ಮೊದಲು ಕೇಳಿದರು. ಕಮಲೆ ನಿಮ್ಮ ಮಗಳೆಂದು ತಿಳಿಯಿರಿ—ಎಂದರು ನನಗೆ. "

" ಒಳ್ಳೆಯ ವೆಂಕಟರಾಯರು ! ನಿಮಗೆ ನಿಮ್ಮ ಮಕ್ಕಳದೇ ಪರಿವೆ ಯಿಲ್ಲ. ಇನ್ನವಳನ್ನು ನೋಡಿಕೊಳ್ಳುತ್ತೀರಾ—ನೀವು ? "

"ನನ್ನನ್ನವರು ಬಲ್ಲರು. ನಿನಗೆ ನೋಡಿಕೊಳ್ಳಲು ಕೇಳಿದ್ದಾರೆ. ನೀನೂ ಅವರಿಗೆ ಹಿರಿಯ ಮಗಳಂತೆ. ಕಮಲೆ ನಿನ್ನ ಬಗ್ಗೆ ಅವರಿಗೆ ತುಂಬ ಹೇಳಿ ದ್ದಾಳೆ. ನೀನಿರುವಿಯೆಂದು ಅವಳಿಗೆ ಯಾವ ಚಿಂತೆಯೂ ಇಲ್ಲವಂತೆ ! "

" ಕಮಲೆ ನನಗೆ ಪ್ರಭೆ ಇದ್ದ ಹಾಗೇ. ಒಮ್ಮೊಮ್ಮೆ ಅವಳಿಗಿಂತ ಇವಳು ಹತ್ತಿರವಾಗಿ ಕಾಣುತ್ತಾಳೆ. ನನ್ನ ಮುಂದೆ ಏನೂ ಮುಚ್ಚುಮರೆ ಯಿಲ್ಲ ಅವಳಿಗೆ. ಹುಚ್ಚುಹುಡುಗಿ ! "

" ಕಾಣುವದಿಲ್ಲವಲ್ಲ ? ಮನೆಯ ಬಾಗಿಲು ಹಾಕಿದೆ ! "

" ಗಂಡಸರೆಲ್ಲಾ ಒಂದೇ. "

" ಅಂದರೆ ! "

" ನೀವು ಮಾಡುತ್ತಿದ್ದಿರಲ್ಲ—ಬೆನ್ನು ಹತ್ತಿ ಹೆಂಡತಿ ಸದಾ ತಿರುಗ ಬೇಕು. "

" ವಾಕಿಂಗ್ ಹೋಗಿದ್ದಾರಿಯೋ ? ಸಿನೇಮಾಕ್ಕೋ—"

" ಎಲ್ಲೋ, ಹೊರಗಂತೂ ಹೋದರು–ಇಬ್ಬರೂ ಕೂಡಿ. ಕಮಲ ಇಂದು ಒಳ್ಳೆ ಸಿಂಗಾರಾಗಿದ್ದಾಳೆ. ಅವಳನ್ನು ನೋಡಿದಾಗ ನನ್ನದೇ ಕಣ್ಣು ತಾಕೀತು—ಅನಿಸಿತು."

" ಹೋಗಲಿ—ಇದೇ ನಾಲ್ಕು ದಿನ ಚೈನೀ ಮಾಡಬೇಕು. ಮುಂದೆ ಈ ಚ್ಯಾ–ಮ್ಯಾ ಆದವೆಂದರೆ ನಮ್ಮ ಹಾಗೇ ಆಗುತ್ತದೆ. ಈಗ ಕರೆದರೆ ನೀನು ಬರುತ್ತೀಯಾ ?"

" ನಡೆಯಿರಿ; ಇನ್ನೂ ಎರಡೇ ಇವೆ. ನೀವು ವಸಂತನನ್ನು ಎತ್ತಿ ಕೊಳ್ಳಿರಿ. ಚಿತ್ರಾ ನನಗಿದ್ದಾಳೆ. ನಪ್ಪಾಪುರವೋ—ಕೆಲಗೇರಿಯೋ ಎಲ್ಲಿಗೆ ಹೇಳಿ."

" ಇಂದೇಕೋ ಒಳ್ಳೇ ಜೋರುಮಾಡುವಿಯಲ್ಲ, ಕುಸುಮ ?"

" ಇನ್ನೇನು ಮಾಡಲಿ ? ಇಂದವರು ಹೊರಟಾಗ ಆಗ ನಾವೂ ಹೋಗುತ್ತಿದ್ದೆವಲ್ಲ—ಅದು ನೆನಪಾಯಿತು. ಸುಂದರಿ ಕಮಲೆಯನ್ನು ಕರೆದು ದೃಷ್ಟಿ ಬಟ್ಟಿಟ್ಟು ಕಳಿಸಿದೆ."

" ದಿನಕರರಾಯರಿಗೆ ದೃಷ್ಟಿಯಾಗುವದಿಲ್ಲವೇನೊ !"

" ಇಂದು ಅವರೂ ರಾಜಾನ ಪಾರ್ಟನಂತಾಗಿದ್ದರು. ಯಾಕೋ ಈಗ ಬಹಳ ಇಳಿದು ಹೋಗಿದ್ದಾರೆ—ಅಲ್ಲವೇ ?"

" ನಾನು ನೋಡಿ ವಾರವಾಯಿತು. ಆಗಂತೂ ಕಮಲೆ ಇದ್ದಿಲ್ಲ. ನಿದ್ರೆಯನ್ನೇ ಮಾಡುತ್ತಿದ್ದಿಲ್ಲ—ಪುಣ್ಯಾತ್ಮ. ಬೆಳಗ್ಗೆ ನೋಡಿದರೆ ಕಣ್ಣು ಗುಲಗಂಜಿಯಾಗಿರುತ್ತಿದ್ದವು."

—ಕುಸುಮೆ ಒಳಗಿನಿಂದ ಧೋತರ ತಂದುಕೊಟ್ಟಳು. ತಮ್ಮ ಕೋಣೆಗೆ ಹೋಗಿ ಬಟ್ಟೆ ಬದಲಾಯಿಸಿ ಬಂದು ಸೀತಾರಾಮರಾಯರು ಬಚ್ಚಲ ಮನೆಗೆ ಹೋಗಿ ಮುಖ ತೊಳೆದುಕೊಂಡು ಬಂದರು.

ಕುಸುಮೆ ಮಕ್ಕಳಿಗೆ ಉಣಿಸುತ್ತಿದ್ದವಳು—

" ನೋಡಿ; ವಸಂತ ಮಾಮಿಕೂಡ ವಾಕಿಂಗ್ ಹೊರಟಿದ್ದ."

" ಕಳ್ಳಾ; ನಮ್ಮ ತಿರುಗಾಟವನ್ನಂತೂ ತಪ್ಪಿಸಿದ್ದೀ. ಅವರಿಗೇಕೆ ಗಂಟು ಬಿದ್ದಿ ?"

" ಕಮಲೆಗೆ ವಸಂತನೆಂದರೆ ಪ್ರಾಣ. ಅವಳು ಕರೆದುಕೊಂಡೇ ಹೊರಟಿದ್ದಳು, ನಾನೇ ಬಿಡಿಸಿಕೊಂಡು ಬಂದೆ."

ಸೀತಾರಾಮರಾಯರಿಗೂ ಕುಸುಮೆ ಅಲ್ಲಿಯೇ ಎಲೆ ಬಡಿಸಿದಳು.

" ಕುಮೀ, ಕಮಲೆ ನಿನಗೇನು ಹೇಳುತ್ತಾಳೆ ?"

" ಅದೆಲ್ಲ ನಮ್ಮ ನಮ್ಮ ಮಾತು. ನಿಮಗೆ ಗಂಡಸರಿಗೇಕೆ ?"

" ಅದಕ್ಕಲ್ಲ ನಾನು ಕೇಳಿದ್ದು. ವೆಂಕಟರಾಯರು ಎಷ್ಟು ಹೇಳಿದರೂ ಇನ್ನೊಂದು ನಾಲ್ಕು ದಿನ ನಿಲ್ಲಲಿಲ್ಲವಂತೆ !"

" ಗಂಡ ಬಂದು ಎದೆಯ ಮೇಲೆ ನಿಂತರೆ ಇನ್ನೇನು ಮಾಡಿಯಾಳು."

" ವೆಂಕಟರಾಯರಿಗೆ ' ಇಲ್ಲೇ ಬಂದು ಇರಬಹುದಲ್ಲ'— ಎಂದೆ."

" ಹೇಗೆ ಬಂದಾರು. ಎಷ್ಟೆಂದರೂ ಮಗಳ ಮನೆ. ನಮ್ಮ ತಂದೆ ನಿಮ್ಮ ಮನೆಗೆ ಬಂದು ಇದ್ದಾರೇನು ?"

" —ನೀನೊಂದು ಮಬ್ಬು ಕುಮೀ, ವೆಂಕಟರಾಯರಿಗೆ ಯಾರಿದ್ದಾರೆ? ಅದಿರಲಿ; ಅವರಿಗೆ ಈ ಅಳಿಯ ದೇವರದೇ ಹೆದರಿಕೆ."

" ಯಾವ ಹೆದರಿಕೆ ? ಪಾಪ; ಬಂಗಾರದಂಥ ಹುಡುಗ. ಮಾವನನ್ನು ಅವನೂ ಕರೆದನಂತೆ !"

" ನಮ್ಮ ಹಾಗೆ ಅವರಿಗೂ ಒಂದೆರಡು ಮಕ್ಕಳಾದರೆ ಅಜ್ಜ ಬಂದು ನೋಡಿಕೊಂಡಾರು."

" ಕಮಲೆ ಏನೆನ್ನುತ್ತಾಳೆ ?"

" ಯಾಕೆ ಅವಳ ಗೊಡವೆ ನಿಮಗೆ ? ಗಂಡ ಸದಾ ಅತೃಪ್ತನಾಗಿ ಅವಳನ್ನು ಪೀಡಿಸುತ್ತಾನೆ. ಏನು ಚಿಂತೆಯೋ ಅವನದು ! ನಾನೇ ಅವಳಿಗೆ ಹೀಗೆ ಹೀಗೆ ಮಾಡು ಎಂದು ತಿಳಿಹೇಳಿದೆ. ಅಂದು ಒಂದಾದರೆ ಇಂದು ಮತ್ತೊಂದು. ಇವನಿಗಾಗಿ ಅವಳು ಕೊರಗಿ ಸೊರಗಿಹೋಗಿದ್ದಾಳೆ."

" ಯಾಕೆ ? ಏನು ಹೇಳಿದಳು ?"

" ಪಾಪ— ಅವಳೇನು ಹೇಳಿಯಾಳು. ನನಗೆ ತಿಳಿಯುವದಿಲ್ಲವೆ ?"

" ನಿನಗೆ ತಿಳಿಯದೇನು ? ಎರಡು ಮಕ್ಕಳ ತಾಯಿ !"

" ಸಾಕು; ನೀವು ಗಂಡಸರೆಲ್ಲಾ ಒಂದೇ. ಸದಾ ನಿಮ್ಮ ಕೂಡ ಕುಣಿಯಬೇಕು. ಇನ್ನೊಂದು ಜೀವಕ್ಕೆ ಏನಾದರೂ ಆಸೆ ಇದ್ದೀತು—

ಮನಸ್ಸಿದ್ದೀತು—ಎಂದು ನಿಮಗನಿಸುವದೇ ಇಲ್ಲ. ನಿಮಗೇನು ಬೇಕು—ಬಾಯಿಬಿಟ್ಟು ಆಡುವಂತಿಲ್ಲ; ತಿಳಿದು ಮಾಡಿದ್ದೂ ತೃಪ್ತಿಯಿಲ್ಲ."

" ಸಾಕು, ಬಿಡೇ ನಿನ್ನ ಪುರಾಣ. ಏನು ಎಂದರೆ ಹೇಳುವಂತಿಲ್ಲ. ಸುಮ್ಮನೇ ಅದು-ಇದು ಎಂದು ಸರ್ವನಾಮದಲ್ಲೇ ಮಾತಾಡುತ್ತೀ. "

" ನಾನು ನೋಡಿದ್ದು-ತಿಳಿದದ್ದು ಹೇಳಿದೆ. ಇಂಥದೇ ಎಂದು ನನಗಾದರೂ ಏನು ಗೊತ್ತು ? "

" ನಾನು ದಿನಕರನಿಗೆ ಏನಾದರೂ ಹೇಳಲೇನು ? "

" ಬೇಡಿ; ಅದನ್ನಷ್ಟು ಮಾಡಿ ಹುಡುಗಿಯ ಗೋಳು ಕಟ್ಟಿಕೊಳ್ಳಬೇಡಿರಿ. ತಂತಾನೆ ಸರಿಹೋಗುತ್ತದೆ. "

* * * *

ಬಾಗಿಲು ಬಡಿದ ಸಪ್ಪಳಾಯಿತು. ಅಲ್ಲಿಟ್ಟಿದ್ದ ಹಾಲಿನ ಪಾತ್ರೆ ಒಯ್ಯಲು ಬಂದ ಕಮಲೆ " ಕುಸುಮಕ್ಕ, ಕುಸುಮಕ್ಕ " ಎಂದು ಕರೆದಳು.

ಒಳಗಿನಿಂದ ಕುಸುಮೆ ಬಂದು ಬಾಗಿಲು ತೆರೆದಳು. ಕಮಲೆಯನ್ನು ನೋಡಿ—

" ಬಾ ನನ್ನ ಗೌರಿ; ಎಲ್ಲಿ ಹೋಗಿದ್ದಿರಮ್ಮಾ—ಯಾವ ಸಿನೀಮ ?

" ಸಿನೀಮಕ್ಕಲ್ಲ ಕುಸುಮಕ್ಕ. "

" ಮತ್ತೆ ವಾಕಿಂಗೇ ? "

ಕಮಲೆ ಸುಮ್ಮನೆ ನಕ್ಕು " ಹಾಲು ಬಂದಿದೆಯೇ ಅಕ್ಕ ? " ಎಂದಳು.

" ಬಂದಿದೆ; ಬಾ ಒಳಗೆ. ಕೊಡುತ್ತೇನೆ. "

ಕುಸುಮೆ ಮುಂದೆ ಮುಂದೆ ಹೋದಳು. ಕಮಲೆ ' ವಸಂತ ' ಎನ್ನುತ್ತ ಅಡಿಗೆ ಮನೆ ನುಗ್ಗಿದಳು. ಒಳಗೆ ಸೀತಾರಾಮರಾಯರನ್ನು ಕಂಡು, ನಸು ನಾಚಿ ಹಿಂದೆ ಸರಿದಳು.

" ಬಾ, ಕಮಲಾಬಾಯಿ; ಬೆಳಗಾವಿಗೆ ಹೋಗಿದ್ದೆ. "

" ಅಪ್ಪ ಸಿಕ್ಕಿದ್ದರಂತೇ ಕುಸುಮಕ್ಕ ? "

" ಸಿಕ್ಕಿದ್ದರವ್ವಾ. ಅವರಲ್ಲಿಯೇ ನಿನ್ನೆ ಊಟವಾಯಿತು. ನಾನು ಬೀಗನಂತೆ ! ಸಮಾರಾಧನೆಯನ್ನೇ ಮಾಡಿಸಿದರು. "

" ಸಮಾರಾಧನೆ ಏನು ಮಾಡಿಯಾರು ? ಹೆಂಗಸರಿಲ್ಲದ ಮನೆ "

ಪಡಸಾಲೆಯಲ್ಲಿ ಬಂದು ನಿಂತ ದಿನಕರನನ್ನು ನೋಡಿ ಕುಸುಮೆ—

" ಕ್ಷೇಮವಾಗಿದ್ದಾರಂತೆ; ನಾನೆಲ್ಲ ಮತ್ತೆ ಹೇಳುತ್ತೇನೆ. ನೀನು ಹೊರಡು ತಂಗೀ. ನಿನ್ನ ಯಜಮಾನರು ಕಾದಿದ್ದಾರೆ."

## ೧೭

ಮತ್ತೊಂದು ದಿನ ! ಅತ್ತಿಕೊಳ್ಳದ ತನ್ನ ಆ ಹುಲ್ಲುಗಾವಲದಲ್ಲಿ ಕಮಲೆಯನ್ನು ಕೂಡಿಸಿಕೊಂಡು ದಿನಕರ ತನ್ನ—ಕೃಷ್ಣೆಯ ಪೂರ್ವದ ಸಂಬಂಧದ ಬಗ್ಗೆ ತಿಳಿಸಬೇಕೆಂದು ಬಯಸಿದ. ತನ್ನನ್ನು ಎಡಬಿಡದೆ ಕಾಡುತ್ತಿದ್ದ ಆ ಒಂದು ಮಹಾಸಮಸ್ಯೆಯನ್ನು ಕಮಲೆಯ ಮುಂದೆ ಅರುಹುವುದರ ಮೂಲಕ ಬಿಡಿಸಿಕೊಳ್ಳಬೇಕೆಂದು ಯೋಚಿಸಿದ. ಎದೆಯ ಭಾರ ತಲೆಯ ಭಾರಗಳನ್ನು ಅವಳ ಹೆಗಲಮೇಲೆ ಇಳುಹಿ ತನ್ನನ್ನು ಹಗುರಮಾಡಿಕೊಳ್ಳಬೇಕೆಂದ.

ಆದರೆ ಕಮಲೆಯ ಈಚಿನ ಚೆಲ್ಲಾಟದ ವೃತ್ತಿಯನ್ನು ಕಂಡ ಅವನಿಗೆ ಅವಳನ್ನು ಈ ಒಂದು ಕರಾಳ ಕತ್ತಲೆಯಿಂದ ತುಡುಕುವುದು ಸರಿಯೇ—ಎಂಬ ವಿವೇಕ ಜಾಗ್ರತವಾಯಿತು. ತನ್ನನ್ನು ನೆಚ್ಚಿಕೊಂಡು, ತಾನೇ ಅವಳಿಗೆ ಸಾರ-ಸರ್ವಸ್ವವೆಂದು ಭಾವಿಸಿಕೊಂಡಿರುವ ಕಮಲೆಗೆ ಈ ಸಮಸ್ಯೆಯೊಂದು ನುಂಗುವ ತುತ್ತಾಗಬಹುದೇ—ಎಂದು ಚಿಂತೆಗೊಳಗಾದ.

ಎಷ್ಟಾದರೂ ಕಮಲೆ ಹೆಣ್ಣು. ಅದು ಈಗ ಅರಳುತ್ತಿರುವ ಮಂದಾರ. ತನ್ನ ಆಸೆ-ಆಕಾಂಕ್ಷೆಗಳನ್ನು ತಿಳಿಯಬಯಸಿ, ಒಂದೊಂದನ್ನೇ ಆಯ್ದುಕೊಂಡು, ಅದಕ್ಕೆ ತನ್ನನ್ನು ಸಮನಿಸಿಕೊಂಡು, ತನ್ನ ಜೀವನರಥದ ಇನ್ನೊಂದು ಗಾಲಿಯಾಗಿ ಸಂಸಾರಪಥವನ್ನು ಸವೆಯಿಸಬಂದ ಕೋಮಲೆಗೆ ಈ ಒಂದು ಸಮಸ್ಯೆಯ ಜಾಲ ಬೀಸುವುದರಿಂದ ಅವಳ ಮನಸ್ಸು ಅದನ್ನು ತಡೆದುಕೊಳ್ಳಲು ಸಮರ್ಥವಾಗಬಹುದೇ ? ಈ ತೊಡಕನ್ನು ಸರಿಯಾಗಿ ಅವಳು ಅರ್ಥಮಾಡಿಕೊಂಡು, ಅದಕ್ಕೆ ತನ್ನ ನಡವಳಿಕೆಯಿಂದ, ಕ್ಷಮಾಗುಣದಿಂದ, ಅದಕ್ಕೆ ಮೀರಿದ ಪ್ರೀತಿ—ವಾತ್ಸಲ್ಯಗಳಿಂದ ತನ್ನನ್ನು ತೂಗಿಕೊಳ್ಳಬಲ್ಲಳೇ—ಎಂದು ವಿವಂಚನೆಗೊಳಗಾದ.

ತನ್ನದು ಅದು ತಪ್ಪೇ ನಿಜ. ಅಂದಿನ ಆ ಪ್ರಸಂಗದಲ್ಲಿ ಕಾಲು ಜಾರಿದ್ದನ್ನು ಇಂದವನು ಪೌರುಷವೆಂದು ಸಮರ್ಥಿಸಿಕೊಳ್ಳಲಾರ. ಅದೊಂದು ಪರಿಸ್ಥಿತಿಯ ಒತ್ತಡಕ್ಕೆ ಬಲಿಯಾದ ತನ್ನ ದೇಹ—ಮನಸ್ಸುಗಳು, ಇಂದು ಕಮಲೆ ಜೀವನಸಖಿಯಾಗಿ ಬಂದಾಗ ಯಾಕೆ ತಿಳಿಗೊಳ ಕಲಕಿ ಹಳೆಯ ರಾಡಿಯನ್ನು ಎಬ್ಬಿಸಬೇಕು ? ಪರಿಸ್ಥಿತಿಯ ಒತ್ತಡವೇನು ? ಅವಳು—ಕೃಷ್ಣೆ, ತಾನಾಗಿ ಬಂದು ತನ್ನನ್ನು ಒತ್ತಾಯಪಡಿಸಿದಳೆಂದರೆ, ಅವಳ ಬಲುಮೆಯಿಂದ ತಾನವಳಿಗೆ ಒಲಿದೆನೆಂದಾದರೆ ತನ್ನ ದೋಷವೇನೂ ಇಲ್ಲೇ ಇಲ್ಲವೇ? ಅವಳು ತನ್ನ ಮನ ಸೆಳೆದದ್ದೊಂದು ಪರಿಸ್ಥಿತಿಯ ದೋಷವೇ ? ತನ್ನ ಮನೋದೌರ್ಬಲ್ಯವೇ ? ಯಾಕೆ ತಾನು ಅವಳ ಆಟಕ್ಕೆ ಈಡಾಗಬೇಕಿತ್ತು ? ಕೃಷ್ಣೆಯಂಥ ಎಷ್ಟು ಹೆಣ್ಣುಗಳನ್ನು ನೋಡಿದ್ದಿಲ್ಲ—ತಾನು ಆವರೆಗೆ ? ಅವರೆಲ್ಲ ಆಕರ್ಷಕರಾಗಿದ್ದಿಲ್ಲವೇನು ತನಗೆ ? ಆದರೆ ಇವಳ ಸಾನ್ನಿಧ್ಯದಲ್ಲಿಯೇ ತನ್ನ ಪಿಪಾಸೆ ಯಾಕೆ ಜಾಗ್ರತವಾಗಬೇಕು ? ಸಾನ್ನಿಧ್ಯ !—ಅದೇ ಕಾರಣವಾಯಿತು. ಆದರೆ ಕೃಷ್ಣೆಗೆ ಏನು ಕಾರಣವಿರಬಹುದು ? ತನ್ನ ದೈಹಿಕ-ಮಾನಸಿಕ ಸೆಳೆತಗಳಿಗೆ ಅವಳು ಯಾಕೆ ಕಾರಣವಾದಳು ? ಅವಳಿಗೆ ಪರಿಸರದ ಪ್ರಜ್ಞೆ ಇರಬೇಡವೇ ? ತನ್ನ ಭವಿಷ್ಯದ ಆಗು ಹೋಗುಗಳ ಹೊಣೆಯನ್ನವಳು ಯೋಚಿಸಬೇಡವೇ ? ಕೇವಲ ತನ್ನೊಂದು ದೇಹದ ನೀರಡಿಕೆಗಾಗಿ ನನ್ನನ್ನು ಕುಡಿದು ಬಿಡಬೇಕೇ?—ಅವಳು ಬಹಳ ತಪ್ಪುಮಾಡಿದಳು; ತನ್ನನ್ನು ಮುಳುಗಿಸಿದಂತಲ್ಲವೇ—ಎಂದುಕೊಂಡ.

ಆದರೆ ಪತಿಯ ಅನಿವಾರ್ಯದ ಅಸಡ್ಡೆಯಿಂದ ದೂರವಿರಿಸಲ್ಪಟ್ಟ ಬೆಳೆದ ಹೆಣ್ಣು ಕೃಷ್ಣೆ, ತನ್ನ ಸ್ವಂತದ ಹೊಣೆಯನ್ನೂ ಮುಂಚೆ ನೋಡಬೇಕಷ್ಟೆ. ಹೌದು; ಅವಳು ತನ್ನ ಹೊಣೆಯನ್ನೂ ಸರಿಯಾಗಿ ನಿರ್ವಹಿಸಲಿಲ್ಲ. ತನ್ನ ಮುಂದಿನ ಜೀವನದಲ್ಲಿ ತನ್ನ ಈ ಸಂಬಂಧದ ದಿನಗಳ ನೆನಪು ತನಗೇ ಯಾತನೆಯಾದೀತೆಂದು ಅಂದವಳು ಯಾಕೆ ಯೋಚಿಸಲಿಲ್ಲ ? ಅವಳು ಯೋಚಿಸಲಿಲ್ಲವೆಂದೇನು ? ಯೋಚಿಸಿಯೇ ಈ ಹೊಂಡಕ್ಕಿಳಿದಿಲ್ಲವೆಂದು ಯಾಕೆ ತಿಳಿಯಬೇಕು ? ಕಂಡೂ ಕಂಡೂ ಕೆಂಡ ಹಿಡಿಯುವ ಹೊತ್ಕನ್ನವಳು ಸ್ವಾಗತಿಸಿದಳೆನ್ನಬೇಕೇ ?

ತವರಿನಲ್ಲವಳು ಹುಚ್ಚಿಯಾಗಿದ್ದಳು. ಬೆಳಗಾವಿಗೆ ಬಂದು ಸರಿ ಯಾದಳು. ತಾನು ಅವಳ ಹುಚ್ಚಿನಲ್ಲೇ ಅವಳ ಸಂಗವನ್ನೇನು ಮಾಡಲಿಲ್ಲ. ಅವಳು ಸುಧಾರಿಸಿದ ಮೇಲೆಯೇ ಅವಳಿಗೆ ಆಶ್ರಯವಿತ್ತೆ; ಅಲ್ಲ—ನಾನೇ ಅವಳ ಆಶ್ರಯಪಡೆದೆ. ಅದೂ ಒಂದು ಹುಚ್ಚಲ್ಲವೇ ? ಯಾರದು ? ಕೃಷ್ಣೆ ಯದೋ—ತನ್ನದೋ !

* * * *

" ಯಾಕೆ ಹೀಗೆ ಕೂತಿದ್ದೀರಿ ? ಮಾತೇ ಆಡುವದಿಲ್ಲ ? "

ದಿನಕರನ ಮನಸ್ಸಿನ ಎಳೆ ಹರಿದಂತಾಗಿ ಎಚ್ಚತ್ತ. ಎದುರು ಕುಳಿತ ಕಮಲೆಯನ್ನು ನೋಡಿದ. ಅವಳು ಸುರ ಸುಂದರಿಯಾಗಿದ್ದಾಳೆ. " ಛೇ, ಕೃಷ್ಣೆಯೆಲ್ಲಿ ? ಇವಳೆಲ್ಲಿ ? " ಎಂದೊಮ್ಮೆ ಅಂದುಕೊಂಡ. ಮರುಕ್ಷಣ " ಇವಳೆಲ್ಲಿ ? ಕೃಷ್ಣೆಯೆಲ್ಲಿ ?" ಎನ್ನುವಂತಾಯಿತು..

" ನೀವು ಹೀಗೆ ದೆವ್ವಬಡಿದವರಂತೆ ಕೂಡಬೇಡಿರಿ " ಎಂದಳು ಕಮಲೆ.

" ಹೌದು; ಕಮಲ, ನನಗೆ ದೆವ್ವಬಡಿದದ್ದು ನಿಜ. ನೀನೇ ಮಾಂತ್ರಿಕ ಳಾಗಿ ಬಿಡಿಸಬೇಕು."

" ನನಗೆ ಅಂಥ ಮಂತ್ರ–ಯಂತ್ರಗಳು ತಿಳಿಯದು. ನನ್ನ ರಾಜ, ನಿನ್ನನ್ನು ಯಾವ ಚಿಂತೆ ಕಾಡುತ್ತಿದೆ ?''

" ಅದೇ ದೆವ್ವವಾಗಿದೆ ನನ್ನ ಕಮಲ. ಅದನ್ನು ನಿನ್ನ ಮುಂದೆ ಹೇಳಿ ನಿನ್ನ ಅಚಲ ಪ್ರೇಮದ, ಅಚಂಚಲ ಶ್ರದ್ಧೆಯ ಮುಂದೆ ಹಾರಿಸಿ ಬಿಡ ಬೇಕೆನ್ನುತ್ತೇನೆ.''

ಕಮಲೆ ನೆಲವನ್ನೇ ನೋಡತೊಡಗಿದಳು. ಅಲ್ಲಿಯ ಹುಲ್ಲುಕಡ್ಡಿಯನ್ನು ಕಿತ್ತು ಎಸೆಯುತ್ತ ಪತಿಯ ಚಿಂತೆಯನ್ನಲ್ಲಿ ಅರಸುತ್ತಿದ್ದಳು. ತನ್ನ ಕಲ್ಪನೆಯ ಅವನ ಆಪತ್ತುಗಳನ್ನವಳು ಹೇಗೆ ಎದುರಿಸಬಹುದೆಂದು ತಾನೂ ಚಿಂತೆಗೊಳ ಗಾದಳು. ತನ್ನ ನಿಸ್ಸಹಾಯತೆಯನ್ನು ಕಲ್ಪಿಸಿ ಕಣ್ಣೀರುಗರೆದಳು.

ದಿನಕರ ಮುಂದೆ ಸರಿದು " ಕ್ಷಮಿಸು ಕಮಲ, ನಿನ್ನನ್ನು ನನ್ನ ಹುಚ್ಚಿನ ಮಾತಿನಿಂದ ನೋಯಿಸಲಾರೆ. ನೀನು ಹೀಗೇ ನನ್ನ ಬಾಳ ಬೆಳುದಿಂಗಳಾಗಿರು" ಎನ್ನುತ್ತ ಅವಳ ಮೈದಡವಿದ. ನಿರಾಧಾರವೆಂಬಂತಿದ್ದ ಕಮಲೆಗೆ ಆಸರ ದೊರೆತಂತಾಗಿ ಅವಳು ಅವನನ್ನು ತಬ್ಬಿಕೊಂಡಳು; ಮತ್ತೂ ಅಳುತ್ತಿದ್ದಳು.

" ಅಳಬೇಡ ಕಮಲ, ನಿನ್ನನ್ನು ಸುಮ್ಮನೆ ನೋಯಿಸಿದೆ. ಕ್ಷಮಿಸ ಲಾರೆಯಾ ? "

" ಅಂಥ ಮಾತನ್ನು ನೀವು ಆಡಬಾರದು. ಕ್ಷಮಿಸುವವರು ನೀವು; ತಪ್ಪು ಮಾಡುವವಳು ನಾನು. "

" ಅದಾಯಿತು. ನನ್ನಿಂದಲೂ ಒಂದೊಂದು ಸಲ ತಪ್ಪುಗಳು ಆಗ ಬಾರದೇನು ? "

" ಇಲ್ಲ; ನನಗೆ ನಿಮ್ಮದಾವುದೂ ತಪ್ಪು ಕಾಣುವದೇ ಇಲ್ಲ. ಕಂಡರೂ ತಪ್ಪೆಣಿಸುವ ಶಕ್ತಿಯೂ ನನಗಿಲ್ಲ. "

" ಶಕ್ತಿಯ ಮಾತಲ್ಲ, ಕಮಲ. ಶಕ್ತಿ ಕೇವಲ ದೈಹಿಕವೇನು ? "

" ಅದನ್ನು ನಾನೆಂತು ಪ್ರದರ್ಶಿಸಲಿ, ನನ್ನ ರಾಜ ? ನಾನು ಅಬಲೆ. ನನಗೆ ತಾಯಿಯ ನೆರೆಯಿಲ್ಲ. ತಂದೆ ಸೋತವರು. ನನಗೆ ನೀವೇ ಸರ್ವಸ್ವ. ನನ್ನನ್ನು ನೀವು ಯಾವ ಕಾಲಕ್ಕೂ—ಏನೊಂದು ಕಾರಣಕ್ಕೂ ಚೆಲ್ಲಿಕೊಡ ಬಾರದು. "

"ಚೆಲ್ಲಿಕೊಡುವ ಮಾತಲ್ಲ, ರಾಣೀ. ನಿನಗೆ ಈ ಚಿಂತೆಯೇಕೆ ಬಂತು?"

" ಮತ್ತೆ ನೀವು ಸದಾ ಹೀಗೆ ಮಾಡುತ್ತಿದ್ದರೆ ಹೇಗೆ ? "

" ಹೇಗೆ ಮಾಡುತ್ತೇನೆ ? "

" ನಾನು ಹೇಗಿರಬೇಕು–ಹೇಳಿ. ನಾನು ಏನು ಮಾಡಬೇಕು–ಹೇಳಿ ಮಾಡಿಸಿಕೊಳ್ಳಿರಿ. ನನಗೆ ಒಮ್ಮೊಮ್ಮೆ ನಿಮ್ಮ ಮುಂದೆ ಏನೂ ತೋಚುವದೇ ಇಲ್ಲ. ನನ್ನ ಅಲ್ಪ ಬುದ್ಧಿಗೆ ಹೊಳೆದಂತೆ ಮಾಡಿದರೆ ನಿಮಗೆ ತೃಪ್ತಿಯಿಲ್ಲ. "

" ನನಗೆ ತೃಪ್ತಿಯಿಲ್ಲವೇ ? "

" ಇದ್ದರೆ ಹೀಗೇಕೆ ? ತಂದೆಯಿಂದ ಏನು ಸಹಾಯ ತಂದೇನೆಂದು ನೀವೇ ಯೋಚಿಸಿ. ನೀವು ' ಕೇಳು ' ಎಂದುದನ್ನು ಕೊಡಲಿ, ಬಿಡಲಿ ಕೇಳು ತ್ತೇನೆ. ಅದರ ಯಶಾಪಯಶ ನನ್ನ ಕೈಯೊಳಗಿನದಲ್ಲ. "

" ನಿಮ್ಮ ತಂದೆಯಿಂದ ನಾನೇನು ಅಪೇಕ್ಷಿಸಿದ್ದೇನೆ ಕಮಲ! ಏನೇನೋ ತಲೆ ತುಂಬಿಕೊಂಡಿದ್ದೀಯಲ್ಲ ? "

" ಮತ್ತೆ ಹೀಗೇಕೆ ಮಾಡುತ್ತೀರಿ ? ಅವ್ವ ಇದ್ದರೆ ಎಲ್ಲಾ ಆಗುತ್ತಿತ್ತು. ನನಗೆ ತಿಳಿಯದ್ದು ಅವಳು ನನಗಾಗಿ ಮಾಡುತ್ತಿದ್ದಳು. "

"ನನಗೆ ಅಂಥದೇನೂ ಬೇಕಾಗಿಲ್ಲ, ಕಮಲ."

"ಸುಮ್ಮನೇ ಹೇಳುತ್ತೀರಿ. ಸೈಕಲ್ ಒಂದನ್ನು ಕೇಳಲಾರದೆ ಕೇಳಿದೆ. ಅಪ್ಪ ನನ್ನ ಮಾತು ನಡೆಸಿದ. ನನಗೆ ಅವನ ಮೇಲೆ ಹೆಚ್ಚಿನ ನಂಬಿಯಿಲ್ಲ."

"ಸೈಕಲ್ ಕೇಳು ಎಂದು ಹೇಳಿದ್ದೆನೇ ನಾನು ?"

"ನೀವಲ್ಲ, ನಾನೇ ಕೇಳಿದೆ."

"ಯಾಕೆ ಕೇಳಿದೆ ?"

"ಯಾಕೆ ಎಂದರೆ ನನಗಾಗಿ."

"ಹುಚ್ಚು ಹುಡುಗಿ ! ನಿನಗಾಗಿ ಕೇಳಿದೆಯಾ ?"

"ಹೌದು; ನನಗಾಗಿ. ನನ್ನ ರಾಜನನ್ನು ದಿನಾ ಮಧ್ಯಾಹ್ನ ನೋಡುವದಕ್ಕಾಗಿ."

"ಪೂರಾ ಹುಚ್ಚು. ನನಗೆ ಇದೇ ಸೈಕಲ್ ಸಾಕಾಗಿತ್ತು." ಎಂದವಳ ಕೈಗಳನ್ನೆತ್ತಿ ತಿರುವಿದ.

"ನಿಮಗೇನು—ಆಫೀಸಿರುತ್ತದೆ."

"ನಿನಗೇನು ? ಮನೆಯಲ್ಲಿರುತ್ತೀ."

"ನೀವಿಲ್ಲದ ಮನೆ........"

"ಇರಲಿಬಿಡು; ನಿಮ್ಮ ತಂದೆಯನ್ನು ಇನ್ನೇನೂ ಕೇಳಬೇಡ, ನನ್ನಾಣೆ!"

"ಒಳಿತನ್ನು ರಾಜ; ಹಾಗೆ ನನ್ನ ಸರ್ವಸ್ವದ ಆಣೆ ಇಡುವ ಅಧಿಕಾರ ನಿನ್ನದಲ್ಲ"

"ಮತ್ತೆ ಹೇಗೆನ್ನಬೇಕು–ಮಹಾರಾಣಿ ?"

"ನನ್ನಾಣೆಯೆನ್ನು ಮಹಾರಾಜಾ."

"ಅದೇ ನನ್ನಾಣೆ........"

"ಛೀ, ಮತ್ತೆ ಅದೇ ಮಾತು. ಒಳಿತು, ಒಳಿತು; ಸಾವಿರಬಾರಿ ಒಳಿತು."

"ನಿನ್ನಾಣೆಯನ್ನು ನಾನಾದರೂ ಹೇಗೆ ಹಾಕಲಿ, ಕಮಲ ?"

"ಈ ಆಣೆಯ ಗೊಡವೆಯೇ ಬೇಡ; ಬಿಟ್ಟುಬಿಡಿ. ಒಳಿತನ್ನಿ."

"ಒಳಿತು, ಒಳಿತು. ಕೋಟಿಕೋಟಿ ಒಳಿತು."

"ನನ್ನ ರಾಜ"

"ನನ್ನ ಕಮಲ !"

" ನಿಮಗೆ ನನ್ನ ಮೇಲೆ ಸಥಿಯಿಲ್ಲವೇ ?"

" ಅಂದರೆ ?"

" ಸತ್ತಾ—ಅಧಿಕಾರ ?"

" ಅದಲ್ಲ; ಒಲವು-ಪ್ರೀತಿ ಅನ್ನಬೇಕು."

" ನೀವಂದುಕೊಳ್ಳಿರಿ ಬೇಕಾದರೆ. ಹೇಳಿ; ಸಥಿಯುದೆಯೆ ?"

" ಇಲ್ಲವೇನು ?"

" ನನಗೆ ಒಂಟಿಕಾಲಿನಲ್ಲಿ ನಿಲ್ಲಹೇಳಿರಿ; ನಿಲ್ಲುತ್ತೇನೆ."

" ಹಾಗೇಕೆ ಹೇಳಲಿ—ಕಮಲ ?"

" ನನಗದೇ ಸಥಿ ನಿಮ್ಮಮೇಲಿರಬಹುದೇ ?"

" ನಾನದನ್ನೇ ಅಪೇಕ್ಷಿಸುತ್ತೇನೆ. ನಾನು ನಿಂತು ತೋರಿಸಲೇ ? ನೀನೇ ನನ್ನದು ನಿನ್ನದು ಎಂದು ಭೇದಮಾಡುತ್ತೀ."

" ನಾನು ಭೇದಮಾಡಿದೆನೇ ? ಸುಮ್ಮನೇ ನನ್ನನ್ನು ದೂರ ಬೇಡಿರಿ."

ಮತ್ತೆ ಕಮಲೆ ಕಾತರಳಾಗಿ ನೆಲ ನೋಡಿದಳು. ಒಂದು ತೊಟ್ಟು ನೀರು !

" ಎಂಥ ಹುಚ್ಚಿ ಕಮಲ—ನೀನು ?"

" ಭೇದಮಾಡುವದಕ್ಕಿಂತ ಹುಚ್ಚೇ ಲೇಸು."

" ಭೇದವೆಂದರೇನೆಂದುಕೊಂಡಿ ?"

" ಇನ್ನೇನು ?".

" ನನ್ನದೆಲ್ಲಾ ನಿನ್ನದು—ಹೀಗೆ ನೀನು ತಿಳಿಯಬೇಕು."

" ನಾನೀಗ ತಿಳಿದಿಲ್ಲವೇ ?"

" ನೀನು ತಿಳಿದಂತೆ ನನಗನಿಸುವದಿಲ್ಲ."

" ನಿಮಗನಿಸಲು ನಾನೇನು ಮಾಡಿತೋರಿಸಲಿ ?"

" ನನ್ನ ಮನೆ ನಿನ್ನದಲ್ಲವೇ ? ನನ್ನ ಸಂಬಳ ನಿನ್ನದಲ್ಲವೇ ?"

" ಇದೊಂದೇ ನನ್ನದು " ಎಂದು ಅವನ ಗಲ್ಲಗಳನ್ನು ಸವರಿ, "ಸಂಬಳ—ಅದರ ಚಿಂತೆ—ಮನೆಯಾಕೆ ನನಗೇಕೆ ?"

" ಸಂಬಳವೆಂದರೆ ಕೇವಲ ಪಗಾರವಲ್ಲ—ಕಮಲ."

" ಇನ್ನೇನು ?"

"ಅದನ್ನು ಬಳಸುವ ಅಧಿಕಾರ ನೀನು ವಹಿಸಬೇಕು."

"ನಾಳೆ ಆಫೀಸಿಗೆ ಕರೆದು ಕೆಲಸಕೊಡಿಸುತ್ತೀರಾ ?'' ಎಂದು ನಕ್ಕಳು.

ದಿನಕರನೂ ನಗುತ್ತ, "ನನ್ನ ಆಫೀಸಿನಲ್ಲಿ ನಿನ್ನಂಥ—ಅಂದರೆ ನಿನ್ನ ಹಾಗೆ, ಅಲ್ಲ—ಅಲ್ಲ....''

"ಏನು ? ಏನು ? ಹುಡುಗಿಯರಿದ್ದಾರೆಯೇ ?"

"ನಿನ್ನಂಥ ಅಲ್ಲ."

"ಸುಂದರಿಯರು ಇರಬಹುದು."

"ಅಲ್ಲ, ಬರೀ ಖಾಲೀ ಹುಡುಗಿಯರಿದ್ದಾರೆ."

"ಈ ಮನೆತುಂಬಿದ ಹುಡುಗಿಯೂ ಅಲ್ಲಿ ಬರಬೇಕೇ ?"

"ಛೀ, ನಾನು ಹಾಗೆಂದೆನೇ ?''

"ಅದೊಂದು ಅನ್ನಬೇಡಿರಿ."

"ಚಂದ್ರ ಮೋಡದ ಮುಸುಕಿನಿಂದ ಹೇಗೆ ಹೊರಕ್ಕೆ ಬಂದ ? ಹೊತ್ತಾಗ ಲಿಲ್ಲವೇ ?"

"ಹೊತ್ತಿಗೇನು ? ಆಗುತ್ತಲೇ ಇರುತ್ತದೆ.''

"ಹೊರಡೋಣವೇ ?"

"ಹೂ–ಹೊರಡೋಣವಂತೆ. ಅಲ್ಲಿಯಾದರೂ ಮನೆಯಲ್ಲಿ ಮತ್ತೆ ಯಾರಿದ್ದಾರೆ ? ನಾವೇ ಇಬ್ಬರಲ್ಲವೇ ?''

"ಹೇಳುವವರಿಲ್ಲ—ಕೇಳುವವರಿಲ್ಲ."

"ಯಾಕೆ—ನನಗಿದ್ದಾರೆ."

"ಯಾರು ? ಕುಸುಮಾಬಾಯಿಯೇ ?"

"ಅವಳೂ ಹೌದು.''

"ಮತ್ತೆ ಯಾರು ?''

"ನೀವು !''

"ನನಗೆ ?"

"ನಾನು !"

"ಇರಲಿ; ಏಳಿನ್ನು. ಈಗಿನ ಹುಡುಗಿಯರಿಗೆ ಮನೆಯೇ ಬೇಡ."

" ಹೆಂಡತಿಯನ್ನು ಮನೆಯಿಂದ ಹೊರಕ್ಕೆ ಹೊರಡಿಸುವದೆ ಈಗಿನ ಗಂಡಸರ ಆಸೆ."

" ಸಾಕು, ಏಳೇ ಇನ್ನು—"

" ನನಗೊಂದು ಮಾತುಕೊಟ್ಟರಿ—"

ಏನೋ ಹೊಸ ಪ್ರಕರಣ ಸುರುವಾಯಿತೆಂದುಕೊಂಡು ಸ್ವಲ್ಪ ಹೆದರಿದಂತಾದ ದಿನಕರ.

" ಏನು ಹೇಳು.''

" ಮಾತು ಕೊಡಿ."

" ಮಾತು ಕೇಳಬಾರದು ಕಮಲ.''

" ಅದೇ—ನನಗೆ ಸಥಿಯಿಲ್ಲವೆಂದದ್ದು."

" ಸಥಿಯಿಲ್ಲವೆಂದೆನೇ ?"

" ಮತ್ತೇಕೆ—ಮಾತುಕೊಡಿ."

" ಎಷ್ಟು ಮಾತು ?"

" ಒಂದೇ ಒಂದು."

ಕೈಕೆಯ ವರವೇನು ಕಾದಿದೆಯೋ—ತನಗೆ, ಎಂದು ದಿನಕರ ಸ್ವಲ್ಪ ಸಂಕೋಚದಿಂದ " ಹೂಂ " ಎಂದ.

" ಬಹಳ ಜಡವಾಗಿ ಬಂತು ' ಹೂಂ'ಕಾರ."

" ಹೇಳು ಮಹಾರಾಯಳೇ. ಯಾಕೆ ಕಾಡುತ್ತೀ ?"

" ನೋಡಿ; ಸಿಟ್ಟು ಬರುವದಿಲ್ಲವೆನ್ನುತ್ತೀರಿ ? ಈಗ ಹೇಗೆ ಬಂತು ?"

" ಥೂ ! ಥೂ ! ನನ್ನನ್ನು ಸೋಲಿಸಿಬಿಟ್ಟೆಯಲ್ಲ !"

" ನಡೆಸಿ ಕೊಡುತ್ತೀರಾ—ಹೇಳಿ."

" ಹೂ—ಹೇಳು.''

" ನನಗೊಂದು...."

" ಸೀರೆಯೋ—ಪೀತಾಂಬರವೋ ?"

" ಅಲ್ಲ; ಊಲನ್ ಸೂಟ್ !"

ಇಬ್ಬರೂ ನಗುತ್ತ ಎದ್ದರು. ಕಮಲೆ ಮತ್ತೊಮ್ಮೆ ' ಹೂಂ ' ಎನಿಸಿಕೊಂಡು ಗೆದ್ದವಳಂತೆ ಹಾರಾಟದಲ್ಲಿ ಎದ್ದಳು.

ದಿನಕರ ' ಏನೋ ನೆನಸಿದೆ—ಇನ್ನೇನೋ ಆಯಿತು' ಎಂದುಕೊಳ್ಳುತ್ತ ತಪ್ಪು ಹೆಜ್ಜೆ ಇಡುತ್ತ ನಡೆದ.

ಕಮಲೆ ಮುಂದೆ ಮುಂದೆ ನಡೆಯುತ್ತ "ಬನ್ನಿ—ಬನ್ನಿ—ದಾರಿ ಯಾವುದು ? " ಎಂದು ಹಿಂದಿರುಗಿ ಕೇಳಿದಳು.

" ಇನ್ನು ನನ್ನ ದಾರಿ ನೀನು ನಡೆದದ್ದೇ—ಕಮಲ " ಎಂದು ದಿನಕರ ಕಮಲೆಯನ್ನು ಹಿಂಬಾಲಿಸಿದ.

## ೧೮

ಪ್ರಭೆ ತನ್ನ ಮ್ಯಾಟ್ರಿಕ್ ಪರೀಕ್ಷೆ ಮುಗಿಸಿ ಕೊಲ್ಲಾಪುರದಿಂದ ಅಕ್ಕನ ಮನೆಗೆ ಬಂದಳು. ಅಭ್ಯಾಸ-ಪರೀಕ್ಷೆಗಳ ಚಿಂತೆಯನ್ನು ಹೊಡೆದೋಡಿಸಿದ ಅವಳು ಪರೆ ಬಿಚ್ಚಿದ ಹಾವಾಗಿದ್ದಾಳೆ.

ಅವಳೊಡನೆ ಅವರ ತಂದೆ—ದಾದಾ ಎಂದು ಕರೆಯುತ್ತಾರೆ ಅವರನ್ನು—ಬಂದವರು ಅಂದೇ ಸಂಜೆ ಮಾತಿಗೆ ಕುಳಿತಾಗ ಅವಳ ಮದುವೆಯ ಪ್ರಸ್ತಾಪವೆತ್ತಿ ಸೀತಾರಾಮರಾಯರಿಗೆ ಎಲ್ಲಿಯಾದರೂ ಒಂದು ಒಳ್ಳೆಯ ವರ ನೋಡಲು ಬಿನ್ನವಿಸಿದರು. ಸೀತಾರಾಮರಾಯರಿಗೆ ಸುತ್ತಲೂ ಕಣ್ಣು; ತುಂಬಾ ಪರಿಚಯ. ಅವರು ಅದನ್ನು ನಿರ್ವಹಿಸಿಯಾರೆಂದು ಪ್ರಭೆಯ ತಂದೆಯ ಆಸೆ.

" ಪ್ರಭಾ, ನಿನ್ನ ಅಭ್ಯಾಸವಿನ್ನು ಮುಗಿದಂತಾಯಿತು. " ತಂದೆ ಹೇಳಿದರು.

" ಯಾಕೆ ದಾದಾ, ಅವಳು ಕಾಲೇಜು ಸೇರಬೇಡವೇ ? " ಎಂದು ಕೇಳಿದಳು ಕುಸುಮಾ.

" ಕುಸುಮಕ್ಕ, ನನ್ನ ಪರೀಕ್ಷೆಯಾದರೂ ಇಳಿಯಲೇಳು. "

" ನಿನ್ನನ್ನು ಯಾರು ಫೇಲ್ ಮಾಡಬಹುದು ? " ಸೀತಾರಾಮರಾಯರೆಂದರು.

" ಮಾಮಾ, ಎಷ್ಟೆಂದರೂ ಅದು ಪರೀಕ್ಷೆ. "

" ಧೈರ್ಯವಿರಬೇಕು ಪ್ರಭಾ, ಹೇಳು-ಪಾಸಾಗುತ್ತೇನೆಂದು ಹೇಳು. "

" ಆಗಲಿ; ಹೇಳುತ್ತೇನೆ. "

" ಪಾಸಾಗಲಿ, ಬಿಡಲಿ— ಇನ್ನವಳ ಮದುವೆ ಮಾಡುವದೆಂದು ನಿಮ್ಮ ಅತ್ತೆಯ ಒತ್ತಾಯ, ಸೀತಾರಾಮರಾವ್. "

" ಏನವಸರ ? "

" ಕುಸುಮಾನ ಮದುವೆಯಾದಾಗ ಅವಳು ನಾಲ್ಕನೆಯ ಕ್ಲಾಸಿನಲ್ಲಿದ್ದಳು. "

" ನಾನೇ ಬಂದು ನಿನ್ನ ಶಾಲೆಗೆ ಕಲ್ಲು ಹಾಕಿದಂತಾಯಿತೇನೇ ? "

" ಅವ್ವ ಆ ಮೊದಲೇ ನನ್ನ ಶಾಲೆಗೆ ಮುಳ್ಳು ಹಚ್ಚಿದ್ದಳು. " ಎಂದು ಕುಸುಮೆ ನಗೆಯಾಡುತ್ತ, " ಅದು ನಮ್ಮ ಕಾಲವಾಯಿತು. ಇಂದು ಪ್ರಭಾ ಮ್ಯಾಟ್ರಿಕ್‌ವರೆಗಾದರೂ ಬಂದಳು " ಎಂದಳು.

" ನಾನು ಕಾಲೇಜು ಸೇರಬಾರದೇ–ದಾದಾ ? "

" ಮೊದಲು ಮದುವೆ; ನಿನ್ನ ಗಂಡನನ್ನು ಕೇಳಿ ಬೇಕಾದರೆ ಕಾಲೇಜ ಓದು. "

" ಮದುವೆಯಾದ ಮೇಲೆ ಯಾವ ಗಂಡ ಹೆಂಡತಿಯ ಓದಿಗೆ ಸಮ್ಮತಿಸಿಯಾನು ? " ಕುಸುಮೆ ತನ್ನ ಅನುಭವ ಹೇಳಿದಳು.

" ನಾನು ಧಾರವಾಡದ ಕಾಲೇಜಿನಲ್ಲೇ ಓದುತ್ತೇನೆ. "

" ನಿನ್ನ ಮಾಮಾ ನಿನ್ನ ಮದುವೆಯ ಜವಾಬ್ದಾರಿ ಹೊತ್ತರೆ ನನ್ನದೇನೂ ಅಡ್ಡಿ ಇಲ್ಲ. "

" ಅವ್ವ ಕೇಳಬೇಕಲ್ಲ ! "

" ಕಾಲೇಜು ಸೇರಿದರೆ ಮದುವೆಯೇ ಆಗುವದಿಲ್ಲವೆಂದು ಅವಳ ಹೆದರಿಕೆ. "

ಬಾಗಿಲಲ್ಲಿ ನಿಂತ ಕಮಲೆಯನ್ನು ನೋಡಿ ಪ್ರಭಾ ಮುಂದೆ ಬಂದು ಕರೆದೊಯ್ದಳು.

" ದಾದಾ, ಇವಳೇ ನನ್ನ ಕಮಲಕ್ಕ "

" ಹೌದವ್ವ, ನಿನ್ನ ಕಮಲಕ್ಕನನ್ನು ನೋಡಬೇಕಾಗಿತ್ತು. "

" ಕಮಲಕ್ಕ, ಇವರು ನನ್ನ ತಂದೆ. "

ಕಮಲೆ ಅವರಿಗೆ ನಮಸ್ಕರಿಸಿದಳು.

" ಅಷ್ಟಪುತ್ರ ಸೌಭಾಗ್ಯವತೀ ಭವ " ಎಂದು ಹರಸುತ್ತ ದಾದಾ, " ನಿನ್ನ

ಸುದ್ದಿ ಎಷ್ಟು ಹೇಳಿದರೂ ಪ್ರಭೆಗೆ ಸಾಕಾಗುವದಿಲ್ಲ ನೋಡವ್ವಾ, ಕಮಲಾ ಬಾಯಿ. ”

“ ಪ್ರಭಾನ ಮದುವೆಯೆಂದು ? ” ಕಮಲೆ ಸಣ್ಣಗೆ ಕೇಳಿದಳು.

“ ಹೋಗೇ ಕಮಲಕ್ಕ; ನೀನೂ ನನ್ನನ್ನು ಹೊರದೂಡಬೇಕೆನ್ನುತ್ತೀ.”

“ ಕುಮೀ, ಕಮಲೆಯ ತವರುಮನೆ ಬೆಳಗಾವಿಯೋ ? ”

“ ಹೌದು; ಮಿರ್ಜಿ ವೆಂಕಟರಾಯರು ಇವರ ತಂದೆ. ಪೆನ್ಶನ್ ಆಗಿದೆ. ಮಗಳ ಮದುವೆ ಮಾಡಿದರು; ಈಗ ಅವರಿಗೆ ತೀರ್ಥಯಾತ್ರೆಯೇ ಕೆಲಸ.”

“ ಒಬ್ಬರೇ ಆದರು; ಇನ್ನೇನು ಮಾಡಬೇಕು ? ” ಸೀತಾರಾಮರಾಯ ರೆಂದರು.

“ ಮಗಳ ಮನೆಯಲ್ಲಿ ಬಂದು ಇರಬೇಕು ” ಪ್ರಭೆಯ ಮಾತು.

“ ನಿನಗೆ ತಿಳಿಯದ ಮಾತು ಆಡಬಾರದು, ಪ್ರಭಾ ” ದಾದಾನ ಎಚ್ಚರ.

“ ಇದರಲ್ಲೇನು ತಿಳಿಯುವದು ? ಕಮಲಕ್ಕ ಎಷ್ಟು ಕರೆದರೂ ಬರುವ ದಿಲ್ಲವಂತೆ ! ”

“ಅವಳು ಕರೆಯುವದೂ ಚೆಂದ; ಅವರು ಬರದಿರುವದೂ ಚೆಂದ. ”

ಕಮಲೆಯೂ ದನಿಗೂಡಿಸಿದಳು :

“ ಕುಸುಮಕ್ಕ, ದಾದಾ ನಿನ್ನ ಮನೆಗೆ ಎಷ್ಟು ಸಲ ಬಂದಿದ್ದಾರೆ ? ”

“ ಹೌದು; ಅವರು ಬಂದಂತೆಯೇ ಇಲ್ಲ. ” ಎಂದು ಸೀತಾರಾಮ ರಾಯರು ನುಡಿದರು.

“ ನೀವು ಬಹಳ ಕರೆದದ್ದೂ ಅಷ್ಟರಲ್ಲೇ ಇದೆ. ” ಕುಸುಮೆಯ ಕೊಂಕು!

“ ಅವರೇಕೆ ಕರೆಯಬೇಕು ಕುಮೀ, ಅಳಿಯದೇವರು ! ”

“ ಇನ್ನೇತರ ಅಳಿಯದೇವರು—ವಸಂತ ಸಾಲಿಗೆ ಹೋಗುವಂತಾದ. ”

“ ವಸಂತ ಸಾಲಿಗೆ ಹೋಗಲಿ; ಅವನು ಇನ್ನೊಬ್ಬರಿಗೆ ಅಳಿಯ ನಾಗಲಿ. ನನಗೆ ಇವರು ಅಳಿಯದೇವರೇ ಕುಮೀ. ”

“ ನಾನೇನು ಕರೆಯುವದು ? ಈಗಾದರೂ ಬಂದರಲ್ಲ ? ”

“ ಈಗ ಪ್ರಭೆಗೆ ಗಂಡನ್ನ ಹುಡುಕಬೇಕು; ಬಂದರು. ”

“ ಹೌದವ್ವ, ನಿನ್ನ ತಾಯಿ ನನ್ನನ್ನು ಮನೆ ಸೇರಿಸುವದಿಲ್ಲ—ಹಾಗೇ ಹೋದರೆ !

" ಇಲ್ಲೇ ಇದ್ದುಬಿಡಿರಿ. " ಕಮಲೆ ದನಿ ಎಳೆದಳು.

" ನೀನೂ ನನ್ನ ಮಗಳೇ ಕಮಲ. ಇದ್ದರೆ ನಿನ್ನ ಮನೆಯಲ್ಲಿದ್ದೇನು. ಈ ಖಾಸ ಮಗಳ ಮನೆಯಲ್ಲಿ ಹೇಗಿರಲಿ ? "

" ನೀವು ಕಮಲಕ್ಕನ ಮನೆಯಲ್ಲೇ ಇದ್ದರೆ ವೆಂಕಟರಾಯರು ಕುಸುಮಕ್ಕನ ಮನೆಗೆ ಬಂದು ಇದ್ದಾರು. "

ಪ್ರಭೆಯ ಚಾತುರ್ಯ ಕಂಡು ಎಲ್ಲರೂ ನಕ್ಕರು.

ದಿನಕರ ಬಂದುದನ್ನು ನೋಡಿದವಳು ಪ್ರಭೆಯೇ.

" ಕಮಲಕ್ಕ, ಓಡು; ಮಾವಾ ಬಂದರು. " ಎಂದು ತಾನೇ ಓಡಿ ಹೋಗಿ,

" ಬರ್‍ರೀ ಮಾವಾ, ಮಾವಾ ಕರೀತಾರೆ. "

" ಪ್ರಭೆ ಬಹಳ ಅಧಿಕ ಪ್ರಸಂಗಿಯಾಗಿದ್ದಾಳೆ! " ದಾದಾ ನುಡಿದರು.

" ಹಾಗೇನಿಲ್ಲ; ಅವಳಿಗೆ ಇಲ್ಲಿ ಚೆಲ್ಲಾಟವಾಗಿದೆ." ಕುಸುಮೆಯೆಂದಳು.

" ಅದಕ್ಕೇ ಅಂದದ್ದು. "

" ಬರ್‍ತೇನೆ ಕುಸುಮಕ್ಕ " ಎಂದು ಕಮಲೆ ಎದ್ದಳು.

" ದಿನಕರ ರಾಯರನ್ನು ಇಲ್ಲೇ ಕರೆಯುತ್ತೇನೆ " ಎಂದು ಸೀತಾರಾಮರಾಯರೆದ್ದರು. ಅಷ್ಟರಲ್ಲಿ ಪ್ರಭಾ ದಿನಕರನೊಂದಿಗೆ ಒಳಗೆ ಬಂದಳು.

ಕುಸುಮೆ ಎಲ್ಲರಿಗೆ ಚಹಾ ಸರಬರಾಯಿ ಮಾಡಿದಳು. ದಾದಾ ದಿನಕರರಾಯರಿಗೂ ಪ್ರಭೆಗೆ ವರ ನೋಡಲು ಬಿನ್ನವಿಸಿಕೊಂಡರು.

" ಹಾಗಾದರೆ ಪ್ರಭಾ ಹೋಳಿಗೀ ಹಾಕುವವಳು. " ದಿನಕರನೆಂದ.

" ಅವಳೇನು ಹಾಗೇ ಇದ್ದಾಳು. ಎಷ್ಟು ದಿನ ಬೆಳೆಸೋಣ ದಿನಕರರಾವ್, ಈ ಹೆಣ್ಣುಮಕ್ಕಳನ್ನ? ಬೆಳೆಸಿದರೂ ವ್ಯರ್ಥ. ಗಂಡಾದರೆ ಮನೆ ನಿಲ್ಲಿಸುತ್ತದೆ. " ಎಂದು ದಾದಾ ನಕ್ಕರು.

" ಕುಲಕೋಟಿಯನುದ್ಧರಿಪಳು " ಎಂದು ಪ್ರಭೆ ಹಾಡಿದಳು.

" ಕೊಲ್ಲಾಪುರದಲ್ಲಿ ಇಷ್ಟು ಹಾರಾಡುವದಿಲ್ಲ ನೋಡು, ಕುಮೀ ಇವಳು !" ಎಂದು ದಾದಾ ಪ್ರಭೆಯನ್ನು ಹತ್ತಿರ ಕರೆದು ತಲೆಯ ಮೇಲೆ ಕೈಯಾಡಿಸಿದರು.

" ಅಲ್ಲಿ ಅವ್ವ ಇರುತ್ತಾಳೆ " ಕುಸುಮೆ ನುಡಿದಳು.

ಕಮಲೆ ಯಾವಾಗಲೋ ಮನೆಸೇರಿದ್ದಳು. ದಿನಕರನೂ ಎದ್ದ.

## ೧೯

ಅಂದು 'ನನಗೆ ಊಲನ್ ಸೂಟ್' ಎಂದು ಬೇಡಿದ ಕಮಲೆ ಇಂದಿಗೂ ಅದಕ್ಕೆ "ನನ್ನ ಊಲನ್ ಸೂಟ್" ಎಂದೇ ಅನ್ನುತ್ತಾಳೆ. ಒಂದು ದಿನ ಸಂಜೆ ದಿನಕರ ಬಂದು 'ನಾಳೆ ಸೂಟ್ ಸಿಗುತ್ತದೆ' ಎಂದ. 'ಇಂದೇ ಯಾಕೆ ತರಲಿಲ್ಲ—' ಎಂದು ಕೇಳಿದಳು ಕಮಲೆ.

"ಏನವಸರ ? ನಾಳೆ ಬೆಳಗ್ಗೆ ಹೋಗಿ ತರುತ್ತೇನೆ" ದಿನಕರನೆಂದ.

"ಇಲ್ಲ; ಇಂದೇ ಹೋಗಿ ಬರ್ರಿ; ಕತ್ತಲಾದರೂ ಚಿಂತೆಯಿಲ್ಲ. ಬೇಕಾದರೆ ನಾನೂ ಬರುತ್ತೇನೆ—" ಎಂದಳು ಕಮಲೆ.

"ನೀನೇಕೆ ಬರುತ್ತೀ ? ನಾನೇ ಹೋಗಿ ತರುತ್ತೇನ" ದಿನಕರನೆಂದ.

ಕಮಲೆ ಅವಸರದಲ್ಲಿ ಚಹಾ ಮಾಡಿಕೊಟ್ಟಳು. ಕುಡಿದು ಹೊರಟ ದಿನಕರ. ಹೊರಡುವಾಗ 'ನೀನೂ ಬರುತ್ತೀಯಾ—ಕಮಲ' ಎಂದ. 'ಬಾ ಎಂದರೆ ಬಂದೇನು' ಎಂದಳು. 'ಅಲ್ಲಿ ಕೂತು ಮಾಡಿಸಿಕೊಂಡು ಬರಬೇಕು. ನೀನೆಲ್ಲಿ ಕೂಡುತ್ತೀ' ಎಂದು ಒಬ್ಬನೇ ಹೊರಟ.

ಪ್ರಭೆ ಬಂದಾಗ ಕಮಲೆ ಒಬ್ಬಳೇ ಇದ್ದಳು. ದಿನಕರ ಪೇಟೆಗೆ ಹೋದದ್ದನ್ನು ಕೇಳಿ "ನಾವೂ ಹೋಗೋಣವೇ ಕಮಲಕ್ಕ ?" ಎಂದಳು.

ಕಮಲೆ ದಿನಕರನ ಕೂಡ ಹೊರಡಲು ಅಂದು ಸಿದ್ಧಳಿದ್ದಳು. ಆದರೆ ಪ್ರಭೆಯ ಕೂಡ ಅವಳು ಹೊರಡಲು ಎಂದಿನಂತೆ ತವಕಗೊಳ್ಳಲಿಲ್ಲ. ಅವಳ ಅಂತರ್ಯದಲ್ಲಿ ಒಂದಾವುದೋ ಆಸೆ ಮೀಸಲಾಗಿ ಕಾಡುತ್ತಿತ್ತು. ಪ್ರಭೆಯನ್ನೂ ತಡೆಯಲು "ಯಾಕೆ ಪ್ರಭಾ, ಸಂಜೆಯಾಯಿತು. ನಾಳೆ ಹೋಗೋಣ" ಎಂದಳು.

"ಮನೆಯಲ್ಲೇ ಕೂತು ಬೇಜಾರು" ಎಂದಳು ಪ್ರಭಾ.

"ನಿನ್ನ ಇಸ್ಪೀಟು ಆಟ ಕಲಿಸು ನನಗೆ" ಎಂದು ಕಮಲೆ ಪ್ರಭೆಯ ಮುಂದೆ ಇಸ್ಪೀಟು ಎಲೆಗಳನ್ನಿಟ್ಟಳು.

"ಅಂತೂ ಕಮಲಕ್ಕ ಸುಧಾರಿಸುತ್ತಿದ್ದಾಳೆ !" ಎಂದಳು ಪ್ರಭಾ.

" ಇಂದಿನ ಹುಡುಗಿಯಾಗಬೇಕಲ್ಲ-ಪ್ರಭಾ, ನಾನೂ. ಹೆಣಿಕೆ ಕಲಿಸಿದಿ; ಆದರೆ ನಿನ್ನ ಸಿನೇಮಾ ಮಾತ್ರ ನನಗಿನ್ನೂ ಕೈವಶವಾಗಲಿಲ್ಲ. ನಿನ್ನ ' ಲಲಾಲಲಾ ' ನನಗೆ ಬರಲೇ ಇಲ್ಲ. " ಎನ್ನುತ್ತ ನಕ್ಕಳು ಕಮಲೆ.

" ಅದೊಂದು ವಿದ್ಯೆಯೇ ? " ಎನ್ನುತ್ತ ಪ್ರಭಾ ಇಸ್ಪೀಟು ಸಂತೆ ನೆರಿಸಿದಳು.

ಕಮಲೆಯ ದೃಷ್ಟಿ ಬಾಗಿಲ ಕಡೆಗೇ ಇತ್ತು. ದಿನಕರ ಬಂದು ಬಿಟ್ಟಾನು ಎಂದು ಕಾಯುತ್ತಿದ್ದಳು. ಅವನು ಬಂದಾಗ ತಾನೇ ಎದುರುಗೊಂಡು ಸೂಟ್ ಇಸಿದುಕೊಳ್ಳಬೇಕೆಂದು ಅವಳ ಬಯಕೆ. ಧರಿಸಿಕೊಂಡೇ ಬಂದಾನೆಂಬ ನಿರೀಕ್ಷೆ ! ಪ್ರಭೆ ಆಗ ಇಲ್ಲದಿದ್ದರೇ ಚೆನ್ನ—ಎಂದೂ ಅವಳ ಮಸಕು-ಮಸಕು ಭಾವನೆ.

ಪ್ರಭೆ ಇಸ್ಪೀಟಿನಲ್ಲಿ ಮುಳುಗಿ ಹೋದಳು. ತಾನೊಬ್ಬಳೇ ಸ್ವರ್ಗದ ಆಟಹಚ್ಚಿಕೊಂಡು ತಲೆಯ ಮೇಲೆ ಕೈಹೊತ್ತು, ತುಟಿಯನ್ನು ಕಚ್ಚುತ್ತ— ಕಣ್ಣು ಹಿಗ್ಗಿಸುತ್ತ ಕುಳಿತಳು. ಆಗಾಗ ಗೋಣುಚೆಲ್ಲುತ್ತ ಹಾ—ಹೂ ಎನ್ನುತ್ತಿದ್ದಳು. ಮಧ್ಯೆ ಮಧ್ಯೆ ' ಕಮಲಕ್ಕ, ಆಯಿತು; ಬಂದೆ ' ಎನ್ನುವಳು. ಇನ್ನೆಲ್ಲಿಗೆ ಇವಳು ಬರುವವಳೋ ಎಂದು ಕಮಲೆ ಹಾರುವ ತನ್ನ ಎದೆ ಸವರಿಕೊಳ್ಳುತ್ತ ಮನೆಯ ಕೆಲಸಕ್ಕೆ ತೊಡಗಿದಳು.

ಕುಸುಮೆ ಬಂದು " ಇದೇನು ಪ್ರಭಾ, ಹೊತ್ತಿಲ್ಲದ ಹೊತ್ತಿನಲ್ಲಿ ನಿನ್ನ ಆಟ ?" ಎಂದಾಗ ಪ್ರಭೆ ಎಚ್ಚತ್ತು ' ಆಯಿತು ಅಕ್ಕ' ಎಂದು ಏನೋ ಮಹಾ ಕಾರ್ಯ ಮಾಡಿದಂತೆ ಎದ್ದು ಕೈಬೀಸಿ ಕಳ್ಳೆ—ಮಳ್ಳೆ ಆಡಿದಳು.

" ನೀನಿನ್ನು ಹುಡುಗಿಯಲ್ಲ— ಪ್ರಭಾ."

" ಯಾರೆಂದರು—ಹಾಗೆ ?"

" ನಾನನ್ನುತ್ತೇನೆ."

" ಅಕ್ಕನೇ ಕುಳಿತು ಹೀಗೆಂದಮೇಲೆ—ಕಮಲಕ್ಕ, ನಾನು ಹುಡುಗಿ ಹೌದೇ—ಅಲ್ಲವೇ ?" ಕೇಳಿದಳು ಪ್ರಭಾ.

" ಅಲ್ಲದೆ ನೀನು ಹುಡಗನಾದೀಯಾ ಪ್ರಭಾ " ಎನ್ನುತ್ತ ಕಮಲೆ ಹೊರಕ್ಕೆ ಬಂದಳು. ಕುಸುಮೆ, ಪ್ರಭಾ ಹೊರಟಾಗ ಅವರಿಗೆ ಕುಂಕುಮದ ಬೊಟ್ಟಿಟ್ಟು, " ಅಕ್ಕ, ನಾಳೆ ನಮ್ಮಲ್ಲಿ ಊಟಕ್ಕೆ ಬರಬೇಕು " ಎಂದಳು.

" ನಾಳೆ ಏನು ಕಮಲ—ಏಕಾದಶಿ !"

" ಇರಲೊಲ್ಲದೇಕೆ....ನಾಳೆ...."

" ಏನು ?"

" ಏನೆಂದು ಹೇಳಲಿ ಕುಸುಮಕ್ಕ ? ಯಾವ ದೊಡ್ಡ ಮಾತೂ ಅಲ್ಲ. ಆದರೆ ನನಗೆ ಕರೆಯಬೇಕೆನಿಸಿತು; ಅಷ್ಟೆ. "

" ನಿನ್ನ ಯಜಮಾನರ ಹುಟ್ಟಿದ ದಿನವೇನು ಮತ್ತೆ ? "

" ಅಲ್ಲ; ನನ್ನದು. "

ಕುಸುಮೆ–ಪ್ರಭಾ ಹೊರಕ್ಕೆ ಹೊರಡುವದಕ್ಕೂ ದಿನಕರ ಬರುವದಕ್ಕೂ ಮೇಳವಾಯಿತು. ಕಮಲೆ ಹೊರಬಂದು ನೋಡಿದಳು; ದಿನಕರನ ಕೈ ಬರಿದು.

" ಮಾಮಾ, ನಾಳೆ ನಮಗೆ ನಿಮ್ಮಲ್ಲಿ ಊಟ " ಪ್ರಭೆಯೆಂದಳು.

" ಅಲ್ಲ; ಫಲಾಹಾರ "—ಕುಸುಮೆ ತಿದ್ದಿದಳು.

ದಿನಕರ ಏನೂ ತಿಳಿಯದೆ ನಿಂತಿದ್ದ.

" ಕಮಲಕ್ಕನ ಹುಟ್ಟಿದ ಹಬ್ಬವಂತೆ ! " ಎನ್ನುತ್ತ ಅಕ್ಕನೊಡನೆ ಪ್ರಭಾ ಹೊರಬಿದ್ದಳು.

ಕಮಲೆ ಮ್ಲಾನಳಾಗಿ ನಿಂತುದನ್ನು ದಿನಕರ ಗುರುತಿಸಿದ.

" ನಾಳೆ ನಿನ್ನ ಹುಟ್ಟು ಹಬ್ಬವೇ ? ನನಗೆ ಹೇಳಲೇ ಇಲ್ಲವಲ್ಲ ? "

" ಅದಿರಲಿ; ಬರಿಗೈಯಿಂದ ಬಂದಿರಲ್ಲ ? "

" ಈಗ ಅವರೇ ಕಳಿಸುತ್ತಾರೆ. ಅದಕ್ಕೇಕಿಷ್ಟು ಆತುರ ? ಅಲ್ಲಿ ಕೂತು ಬೇಸತ್ತು ಬಂದೆ. ನನಗೆ ಹಸಿವೆಯಾಗುತ್ತಿದೆ. ಅಡಿಗೆಯಾಗಿದೆಯೋ ? " ಎನ್ನುತ್ತ ಬಟ್ಟೆ ಬದಲಿಸಿದ.

" ಆಗಿದೆ " ಎನ್ನುತ್ತ ಕಮಲೆ ಯಂತ್ರದಂತೆ ಒಳಕ್ಕೆ ಸಾಗಿ ಎಲೆ ಬಡಿಸಿದಳು. ತನಗೊಬ್ಬನಿಗೇ ಬಡಿಸಿದ್ದನ್ನು ನೋಡಿ ದಿನಕರ

" ಯಾಕೆ—ಒಂದೇ ತಟ್ಟೆ ?" ಎಂದ.

" ಇಂದು ನನಗೆ ಆಮೇಲೆ."

" ಯಾಕೆ ? ನೀನು ಏನೋ ಚಿಂತೆ ಮಾಡುತ್ತೀಯಲ್ಲ, ಕಮಲ ?"

" ನನಗೇನು ಚಿಂತೆ ?"

" ಮತ್ತೆ ಹೀಗೇಕೆ ? ನಾಳೆ ನಿನ್ನ ಹುಟ್ಟಿದ ದಿನವೆಂದು ನನಗೇಕೆ ಹೇಳಲಿಲ್ಲ ?"

" ಎಲ್ಲಿಯ ಹುಟ್ಟಿದ ದಿನ ? ಸುಮ್ಮನೆ ಅಂದೆ."

" ಅಂದರೆ—"

" ಅವರನ್ನು ಊಟಕ್ಕೆ ಕರೆದೆ. ಯಾಕೆ ಎಂದರು. ಏನೂ ಹೇಳಲು ತೋಚಲಿಲ್ಲ."

" ಅದಕ್ಕೆ ಹೀಗೆ ಹೇಳುವದೇ ?"

" ನಾನಾಗಿ ಹೇಳಲಿಲ್ಲ. ಕುಸುಮಕ್ಕ ಕೇಳಿದರು. ಇನ್ನೇನೂ ಕಾರಣ ತೋಚದೆ ' ಹೌದು ' ಎಂದೆ."

ದಿನಕರ ನಗುತ್ತ " ಅಡ್ಡಿಯಿಲ್ಲ " ಎಂದ.

ಬಾಗಿಲ ಸಪ್ಪಳವಾಯಿತು. ಕಮಲೆ ಓಡಿ ಹೋಗಿ ಬಾಗಿಲು ತೆರೆದಳು. ಸಿಂಪಿಗರವನೇ ಬಂದಿದ್ದ. ಗಂಟನ್ನೂ ತಂದಿದ್ದನ್ನು ನೋಡಿ ಕಮಲೆ ಸ್ವಾಗತಿಸುತ್ತ " ಊಟಕ್ಕೆ ಕೂತಿದ್ದಾರೆ. ಸ್ವಲ್ಪ ತಡೆಯುತ್ತೀರಾ ?" ಎಂದಳು.

" ಹೋ; ಆಗಲಿ ಬಾಯೀ " ಎಂದವನು ಗಂಟನ್ನು ಟೇಬಲ್ ಮೇಲಿರಿಸಿ ನಿಂತುಕೊಂಡ.

ಕಮಲೆ ತನ್ನನ್ನು ಸುಧಾರಿಸಿಕೊಳ್ಳಲಾರದೆ ಹೋದಳು. ಆ ಗಂಟನ್ನೇ ಎತ್ತಿಕೊಂಡು ಒಳಕ್ಕೆ ಹೊರಟಳು.

" ಬಾಯೀ, ಅದನ್ನು ಅಲ್ಲಿಯೇ ಇಡಿರಿ. ನಾನೇ ಕೈಮುಟ್ಟಿ ರಾಯರಿಗೆ ತೊಡಿಸಿ ನೋಡಬೇಕು " ಸಿಂಪಿಗನೆಂದ.

' ಇವನೆಲ್ಲಿಯ ಪ್ರತಿಸ್ಪರ್ಧಿ? ' ಎಂದೊಮ್ಮೆ ಕಮಲೆ ಎಂದುಕೊಂಡಳು. ಆದರೆ ಮರುಕ್ಷಣ ಅದೇ ಸರಿ ಎನಿಸಿತವಳಿಗೆ. ಆದರೆ ಗಂಟು ಬಿಚ್ಚಿ ಬಟ್ಟೆಯನ್ನು ಮುಟ್ಟಿನೋಡದೆ ಅವಳಿಗೆ ಸಮಾಧಾನವಿಲ್ಲ.

ದಿನಕರ ಕೈ ಬಾಯಿ ಒರಸಿಕೊಳ್ಳುತ್ತ ಹೊರಕ್ಕೆ ಬಂದ. ಕಮಲೆ ನೋಡಿ ನಾಚಿಕೊಂಡಳು. " ನಿಮ್ಮ ಊಟವಾಯಿತೇ ? " ಎಂದಳು. ಅವಳು ಹೊರಗೆ ನಿಂತವಳು ಅವನಿಗೆ ಕಡೆಯ ಅನ್ನ ಹಾಕಿರಲೇ ಇಲ್ಲ. "

" ಬಿಲ್ಲು ಎಷ್ಟು ಮಾಡಿದ್ದೀರಿ ? " ಎಂದು ಕೇಳುತ್ತ ದಿನಕರ ಖುರ್ಚಿಯಲ್ಲಿ ಕುಸಿದ.

ಸಿಂಪಿಗ ತನ್ನ ಕಿಸೆಯಿಂದ ಬಿಲ್ ತೆಗೆದುಕೊಡುತ್ತ, "ಏಳಿರಿ, ರಾಯರೆ ಶರ್ಟು ಹಾಕಿಕೊಳ್ಳಿರಿ. ಹೇಗೆ ಕೂಡುತ್ತದೆಂದು ನಾನೇ ನೋಡಬೇಕು" ಎಂದ.

"ನಿಲ್ಲಿರಪ್ಪಾ, ಮೊದಲು ಬಿಲ್ ನೋಡುತ್ತೇನೆ" ಎನ್ನುವಾಗ ಕಮಲೆ ಅದನ್ನು ಕಸಿದುಕೊಂಡು ಅವನ ಕೈಗೆ ಶರ್ಟುಕೊಟ್ಟಳು. ಒಳಕ್ಕೆ ಹೋಗಿ ತನ್ನ ಪೆಟ್ಟಿಗೆಯಿಂದ ರೂಪಾಯಿ ತಂದು ಟೇಬಲ್ ಮೇಲೆ ಇಟ್ಟಳು.

ದಿನಕರ ನಿಂತು ಕೋಟು ಹಾಕಿಸಿಕೊಂಡ. ಸಿಂಪಿಗ ಅವನನ್ನು ಹಿಂದೆ-ಮುಂದೆ ನೋಡುತ್ತ ಬೆನ್ನು—ತೋಳು ಸವರುತ್ತಿದ್ದ.

"ಮೈಯಲ್ಲಿ ಹೇಗೆ ಅನಿಸುತ್ತದೆ ರಾಯರೇ ?"

"ಖಣಿ-ಖಣಿ ಎನಿಸುತ್ತದೆ" ಎಂದು ದಿನಕರ ನಕ್ಕ.

"ನೋಡಿರಿ, ಬಾಯಿ; ರಾಯರಿಗೆ ಬಿಲ್ಲಿನ ಮೇಲೆಯೇ ಕಣ್ಣು."

"ನಿಮಗೆ ರೂಪಾಯಿಯ ಮೇಲೆ ಕಣ್ಣಿಲ್ಲವೇ ?" ದಿನಕರನೆಂದ.

ಕಮಲೆ ಕೋಟನ್ನೇ ನೋಡುತ್ತ, "ಮತ್ತೆ ದುಡಿದವರು, ಏನುಮಾಡಿಯಾರು" ಎಂದಳು.

"ಪ್ಯಾಂಟು ಹಾಕಿ ನೋಡುತ್ತೀರಾ ?" ಸಿಂಪಿಗ ಕೇಳಿದ.

"ಅದೂ ಅಷ್ಟು ಆಗಿ ಹೋಗಲಿ" ದಿನಕರ ಒಳಗೆ ಹೋಗಿ ತೊಡಕಿಸಿಕೊಂಡು ಬಂದ.

ಸಿಂಪಿಗ ಹತ್ತಿರ-ದೂರ, ಹಿಂದೆ-ಮುಂದೆ ನೋಡುತ್ತ—"ಹೇಗೆ ರಾಯರೇ ?" ಎಂದ.

"ನಾಳೆ ಹೇಳುತ್ತೇನೆ" ಎಂದ ದಿನಕರ.

"ಆಗಲಿ; ನಾನು ಬರಲೇ ?" ಎಂದು ಸಿಂಪಿಗ ಹೊರಟ.

"ರೂಪಾಯಿ ಬಿಟ್ಟು ಹೊರಟಿರಲ್ಲ" ಎಂದಳು ಕಮಲೆ.

"ನಾಳೆ ರಾಯರು ಹೇಗೆಂದು ಹೇಳಿ ಕೊಡುತ್ತಾರೆ ಬಾಯೀ."

"ಅದಕ್ಕಲ್ಲ ನಾನು ಹೇಳಿದ್ದು—ಲಕ್ಷ್ಮಣ, ನಡೆದಾಡಿ ನೋಡಿ ಮೈಯಲ್ಲಿ ಹೇಗೆಂದು ನಾಳೆ ಹೇಳಿಯೇನು—ಅಂದೆ. ಇಂದು ಕತ್ತಲಲ್ಲಿ, ಮನೆಯಲ್ಲೇ ಕುಳಿತು ಹೇಗೆ ಹೇಳಲಿ ?" ಅಂದ ದಿನಕರ.

" ನೀವು 'ಸರಿ'—ಎಂದು ಹೇಳದೆ ನಾನು ಹಣ ತಕ್ಕೊಳ್ಳುವದಿಲ್ಲ " ಎನ್ನುತ್ತ ಸಿಂಪಿಗ ಹೊರಬಿದ್ದ.

ಕಮಲೆ ಬಾಗಿಲಿಗೆ ಬಂದು, " ಬಿಲ್ಲಿನದು ನೀವು ಏನಾದರೂ ಮಾಡಿಕೊಳ್ಳಿರಿ. ಇಂದು ತಂದುಕೊಟ್ಟಿರಲ್ಲ—ಸಾಕು " ಎನ್ನುತ್ತ ಒಂದು ರೂಪಾಯಿ ಕೊಡಹೋದಳು.

" ನಾನು ಹೀಗೆಲ್ಲ ತಗೊಳ್ಳುವವನಲ್ಲ—ಬಾಯೀ. ಆದರೆ ಸಂಜೆ, ನೀವು ಲಕ್ಷ್ಮಿಯ ಹಾಗೆ ಕೊಡಬಂದಾಗ ಹೇಗೆ ಮಾಡಲಿ ?" ಎಂದು ರೂಪಾಯಿ ಇಸಿದುಕೊಂಡು ಅವಳಿಗೆ ನೆಲಮುಟ್ಟಿ ನಮಸ್ಕರಿಸಿ ಹೊರಟ.

ಕಮಲೆ ಒಂದು ಪ್ಲೇಟಿನಲ್ಲಿ ಮೊಸರೂ ಅನ್ನ ಕಲಸಿ ತಂದು ದಿನಕರನ ಕೈಗಿತ್ತಳು. ' ಇಲ್ಲೇಕೆ ಕಮಲ ? ನಿನ್ನ ಊಟ? ' ಎಂದ. ಹೊಟ್ಟೆ ತುಂಬಿದವಳಂತೆ, ' ನಾನೂ ಇಲ್ಲೇ ತರುತ್ತೇನೆ ' ಎಂದು ಒಳಗೆ ಸಾರಿದಳು. ದಿನಕರ ಅವಳ ಅಂಗಾಗಗಳಲ್ಲಿ ತೃಪ್ತಿ ತುಂಬಿಕೊಂಡುದನ್ನು ಗುರುತಿಸಿದ. ' ತನ್ನ ಊಲನ್ ಸೂಟ್ ಕಮಲೆಯ ಅಭೀಷ್ಟವೂ ಆಯಿತಲ್ಲ ' ಎಂದು ಅವನೂ ಹಿಗ್ಗಿ ಹೋದ. ಮರುದಿನಕ್ಕೆ ಬಂಗಲೆಯ ಜನರನ್ನು ಕಮಲೆ ಊಟಕ್ಕೆ ಆಮಂತ್ರಿಸಿದ್ದಕ್ಕೆ ಕಾರಣ ಇದಲ್ಲದೆ ಬೇರೆ ಇದ್ದೀತೆಂದು ಅವನಿಗೆ ಹೊಳೆಯ

## ೨೦

ದಿನಕರ ಕೃಷ್ಣೆಯ ನೆನಪನ್ನು ಈಗ ಹಿಂದೂಡಿದ್ದಾನೆ. ಕಮಲೆ ಇಂದವನ ಸುಪ್ತ ಆಸೆಗಳನ್ನು ಪ್ರಕಟವಾಗಿ ಸಲ್ಲಿಸಲು ಸಮರ್ಥಳಾಗಿದ್ದಾಳೆಂದು ಅವನ ಎಣಿಕೆ. ಮನೆಯಲ್ಲಿ ಅವಳು ಈಗ ಸ್ವತಂತ್ರಳಂತೆ ವರ್ತಿಸುತ್ತಾಳೆ. ಪತಿಗೆ ಅದನ್ನು ತಾ, ಇದನ್ನು ತಾ ಎಂದು ಸೂಚಿಸುತ್ತಾಳೆ. ತನ್ನ ಬೇಕುಗಳಲ್ಲಿ ದಿನಕರನ ಪಾಲಿನ ಅನುಕೂಲತೆಗಳನ್ನೂ ಸೇರಿಸಿದ್ದಾಳೆ.

ಆಫೀಸಿನ ಕಾಸೀಮ ಈಗ ಮನೆಗೆ ಬಂದು ಇವರಿಗೆ ನೆರವಾಗುತ್ತಾನೆ. ಸೈಕಲ್ ಒರಸಿಡುವದು, ಪಡಸಾಲೆಯ ಕಸ ತೆಗೆಯುವದು, ಪೇಟೆಯಿಂದ ಚಿಲ್ಲರೆ ಸಾಮಾನುಗಳನ್ನು ತರುವದು ಈಗ ಅವನ ಕೆಲಸ.

ಕಮಲೆ ದುಂಡು ದುಂಡಾಗಿ ಕಂಡರೂ ಸೋತವಳಂತೆ ಉಸಿರಿಡುತ್ತಾಳೆ. ಅವಳ ತಿಂಗಳ ರಜೆಯ ದಿನಗಳು ಮುಂದೆ ಮುಂದೆ ಸರಿಯುತ್ತಿವೆ. ಆಗಾಗ ಕಾರಿಕೆ- ಒಕರಿಕೆಗಳು ಅವಳನ್ನು ಕಾಡುತ್ತಿವೆ. ತಲೆ ಸಿಡಿತ, ಕೈಕಾಲು ಬಳಬಳ ಎನ್ನುವದು ಮೊದಲಾಗಿದೆ. ಇದಾವುದನ್ನೂ ತೋರಗೊಡದೆ ತನ್ನ ಕೆಲಸಗಳಲ್ಲಿ ಉತ್ಸಾಹ ತುಂಬಿಕೊಂಡಿರುತ್ತಾಳೆ. ಪತಿಯನ್ನು ಪ್ರಭೆಯೊಡನೆ ಗೇಟಿನಲ್ಲಿಯೇ ಸ್ವಾಗತಿಸುತ್ತಾಳೆ. ಆದರೆ ಪೇಟೆಯ ಸುತ್ತಾಟ, ವಾಕಿಂಗುಗಳಿಗೆ ಇಂದವಳು ಮುಂದಾಗುವದಿಲ್ಲ. ಒಂದೊಂದು ದಿನ ಪ್ರಭೆಯೊಡನೆ ಮ್ಯಾಟಿನೀಗೆ ಹೋದರೂ ಚಿತ್ರ ಮುಗಿಯುವ ಮುಂಚೆಯೇ ಎದ್ದು ಬಂದು ದಿನಕರನನ್ನು ಎಂದಿನಂತೆ ಎದುರುಗೊಳ್ಳುತ್ತಾಳೆ.

ದಿನಕರ ತನಗೆ ದೊರೆತ ವಾಕಿಂಗ್ ಒಪ್ಪಿಗೆಯನ್ನು ಮೊದಲಿನಂತೆ ಬಳಸಿಕೊಳ್ಳಲಾರ. ಒಂದು ದಿನ ಅತ್ತಿಕೊಳ್ಳಕ್ಕೆ ಹೊರಟವನು ಅಲ್ಲಿಗೆ ತಲಪದೆ ಹಿಂದಿರುಗಿದ. ಅತ್ತಿಕೊಳ್ಳದ ವಿಚಿತ್ರ ಸೆಳೆತವನ್ನು ಅದುಮಿಕೊಂಡು ಆಗಾಗ ಕ್ಲಬ್ಬಿನ ದಾರಿ ತುಳಿದು ಸಮಯ ಕೊಲ್ಲುತ್ತಾನೆ. ಅವನ ಸಂಜೆಯ ಸಮಯ ಗೆಳೆಯರ ನಡುವೆ ರಮಿಸದೆ ಕಳೆಯುತ್ತದೆ. ವಿಮನಸ್ಕನಾಗಿ ಆಡುವ ಅವನು ಚಿಲ್ಲರೆ ಹಣ ಕಳೆದುಕೊಳ್ಳುತ್ತಾನೆ. ಪಾಟೀಲ–ಕುಲಕರ್ಣಿಯರೇ ಅವನ ಪ್ರತಿಸ್ಪರ್ಧಿಗಳು.

ಕ್ಲಬ್ಬಿನಲ್ಲಿ ಹೀಗೇ ಒಮ್ಮೆ ಆಡುತ್ತಿರುವಾಗ, ಪಾಟೀಲ ಅಂದ : " ದೇಶಪಾಂಡೇ ರಾಯರ ವಾರದ ಭವಿಷ್ಯದಲ್ಲಿ ಧನಹಾನಿ ಎಂದಿರಬೇಕು. "

ಕುಲಕರ್ಣಿ ದನಿಗೂಡಿಸಿದ : " ಕಳತ್ರ ಸೌಖ್ಯ ಉತ್ತಮವೆಂದಿದ್ದರೂ ಮಿತ್ರರಿಂದ ' ಚಾಲ ' ವೆಂದಿದೆ. "

" ಚವಲವೋ–ಪಾವಲಿಯೋ, ಆಟ ಮರೆತಂತಾಗಿದೆ ನೋಡಿರಿ " ಎಂದು ಒತ್ತಾಯದ ನಗೆ ನಟಿಸಿ ದಿನಕರ ಹೊರಡಲೆತ್ನಿಸುತ್ತಾನೆ.

" ಕೂಡಿರೀ, ಮಿಸ್ಟರ ದೇಶಪಾಂಡೆ, ವಾದದಲ್ಲಿ ಯಶ ಎಂದಿದೆ-ನನಗೆ.

ನಿಮಗೆ ನೌಕರೀ-ಧಂದೇದಲ್ಲಿ ಉತ್ತಮ. ಅಲ್ಲ ರಾಯರ, ನಿಮಗೆ ೬೫/೪೦೦ರ ಗ್ರೇಡು ಸಿಕ್ಕಾಗಲೂ ಇದೇ ಬುದ್ಧಿ ಇರುತ್ತದೆಯೋ-ನೋಡಬೇಕಾಗಿದೆ."

"ಆ ಗ್ರೇಡು ಸಿಗಲಿ, ಕುಲಕರ್ಣಿ. ಬುದ್ಧಿಯೇನು ಬಂತು? ಆಟಕ್ಕೆ ಕೂಡದೆ ನಿಮಗೆ ಲಾಭ ಹಂಚುತ್ತೇನೆ" ಎನ್ನುತ್ತಾನೆ ದಿನಕರ.

"ಅದು ಹೇಗೆ ರಾಯರೆ, ನಾವು ಗೆಲ್ಲುವದಕ್ಕಿಂತ ನಿಮ್ಮನ್ನು ಸೋಲಿಸುವದರಲ್ಲಿರುವ ಆನಂದ ಬಂದೀತೇ-ಅದರಿಂದ?"

"ಅರ್ಥ ಒಂದೇ" ಪಾಟೀಲನ ತರ್ಕ.

"ಛೇ, ಛೇ! ನಾನೊಪ್ಪುವದಿಲ್ಲ. ರಾಯರು ಬಾಕಿ ಮುಟ್ಟಿಸಿದಂತೆ ದಿನಾ ಪುಡಿಕಾಸು ಕೊಟ್ಟರೆಂದು ತಿಳಿಯಿರಿ. ನಾವು ಭಿಕ್ಷೆ ಎತ್ತಿದಂತಲ್ಲವೇ-ಅದು ಗೌಡರೇ? ಹಾಗೆ ಕೇಳಿದರೆ, ವ್ಯಾಪಾರದಲ್ಲಿ ಉದ್ರಿ ಮಾರಾಟದ ಆನಂದ ಬಾಕಿ ವಸೂಲಿಯಲ್ಲಿಲ್ಲ. ವಸೂಲಿಯಾದರೂ ಅದು ಹಿಂದಿನ ದುಡಿಮೆಯ ಫಲ." ಕುಲಕರ್ಣಿಯ ವಾದ.

"ನಿಮಗೇನಪ್ಪಾ, ದುಡ್ಡು ಸಿಕ್ಕರಾಯಿತು."

"ಈ ಗಳಿಕೆಯ ದುಡ್ಡು ಮನೆ ಸೇರುವದೇನು ರಾಯರೇ, ಇದು ಹಾಳೇ! ದಿನಾ ಆಟದಲ್ಲಿ ಹಾಯಾಗಿ- ವಿನೋದವಾಗಿ ಒಂದೆರಡು ತಾಸು ಖರ್ಚಾಗುತ್ತವಲ್ಲ, ಅದೇ ನಿಜವಾದ ಲಾಭ."

ಪಾಟೀಲನೆಂದ: "ಹೊತ್ತು ಹೋಗಬೇಕಾದರೆ ಮದುವೆಯಾಗಬೇಕು, ಶಾನುಭೋಗರೆ. ಆಯುಷ್ಯವೇ ಓಡುತ್ತದೆ ನೋಡಿರಿ, ಆಗ. ಯಾಕೆ ದೇಶಪಾಂಡೆರಾಯರೆ? ನಿಮ್ಮ ಅನುಭವವವೇನು?"

"ಗೌಡರೆ, ನೀವನ್ನುವದು ಎಲ್ಲರಿಗೂ ಹತ್ತುವದಿಲ್ಲ."

"ಹೌದು; ನಿಮಗೆ ಮಾತ್ರ ಆಯುಷ್ಯ ವರ್ಧಿಸುತ್ತಿರಬೇಕು."

ಕುಲಕರ್ಣಿಯೆಂದ: "ಈ ವೃದ್ಧಿ-ವ್ಯಯವನ್ನಲ್ಲ, ನಾನು ಹೇಳುವದು ಗೌಡರೆ. ಬಂದದ್ದು-ಹೋದದ್ದು ಲಕ್ಷಕ್ಕೇ ಬರಬಾರದು. ಅದೇ ಆಟದ ಸೊಗಸು."

"ದೇಶಪಾಂಡೆ ರಾಯರೆ, ಈ ಆಸಾಮಿಗೊಂದು ಹೆಣ್ಣು ನೋಡಿಬಿಡಿರಿ. ಸೆಕ್ಯುಲರ್ ಮದುವೆಯಾಗಬೇಕಾದರೆ ನಾನು ಮಾಡಿಸುತ್ತೇನೆ."

"ಇನ್ನೆರಡು ಬಡತೀ ಇಲ್ಲದೆ ನಾನು ಮದುವೆಯಾಗುವದಿಲ್ಲ, ಗೌಡರೆ"

" ಈಗಲೇ ಒಂದು ಹಿಂಬಡತೀ, ಒಂದು ಮುಂಬಡತೀ ಆಗಿದೆಯೆಂದು ತಿಳಿದರೂ ನಷ್ಟವಿಲ್ಲ. ಇಲ್ಲವಾದರೆ ನಿಮಗೆ ಜಾತ್ಯತೀತ ಮದುವೆಯೇ ಗತಿ ! ಗೌಡರದೇ ಕೆಲಸ ಆಗ. " ಎಂದು ನಕ್ಕ.

ಕಾಸೀಮ ಕಂದೀಲ ಹಿಡಿದುಕೊಂಡು ದಿನಕರನನ್ನು ಕರೆಯಬಂದ. ' ಗುಡ್‌ನೈಟ್ ' ಹೇಳಿ ದಿನಕರ ಹೊರಬಿದ್ದ.

" ನಿಮಗೆ ಗುಡ್-ನೈಟ್ ದಿನಕರರಾವ್, ನಮಗೆ ನೈಟೇ ಗುಡ್ಡವಾಗಿದೆ." ಎನ್ನುತ್ತ ಕುಲಕರ್ಣಿ ದೇಶಾವರಿ ನಗೆ ನಕ್ಕ.

* * * *

ಪಂಢರಪುರ ಯಾತ್ರೆ ಮುಗಿಸಿ ಬಂದ ವೆಂಕಟರಾಯರು ಮಗಳ ಮನೆಯಲ್ಲೇ ಪುಂಡಲೀಕನನ್ನು ಕಳಿಸಿದರು. ಮಗಳ ಮನೆಯ ಓರಣ-ಶಿಸ್ತು ನೋಡಿ ಆನಂದಿಸಿದರು. ಕಮಲೆ ಗುಂಡು-ಗುಂಡಾಗಿದ್ದುದನ್ನು ನೋಡಿ ' ಈಗ ಮೈ ಹಿಡಿದಿದೆ ನೋಡು, ಕಮೂ ' ಎಂದರು. ಕಮಲೆ ನಾಚಿಕೊಂಡು " ಎಲ್ಲರೂ ಹಾಗಂದರೆ ನನ್ನ ಮೈ ಉಳಿಯುವದೇ ಅಪ್ಪ ? " ಎಂದಳು.

ಒಂದು ಮಧ್ಯಾಹ್ನ ಸೀತಾರಾಮರಾಯರು ವೆಂಕಟರಾಯರನ್ನು ಚಹಾಕ್ಕೆ ಆಮಂತ್ರಿಸಿದ್ದರು. ನಗೆಯಾಡುತ್ತ ಕುಸುಮಾ ಅಂದಳು :

" ಕಾಕಾ, ಮೊಮ್ಮಗನ ಫೇಡೇದ ತಯಾರಿ ಇಡಿರಿ. "

" ಏನು ಕುಸುಮಕ್ಕ, ಚಿತ್ರಾ-ವಸಂತ ನನಗೆ ಮೊಮ್ಮಕ್ಕಳಲ್ಲವೇನು ?"

" ಯಾರು ಅಲ್ಲ ಅಂದರು ಕಾಕಾ ? ಅದಲ್ಲ ನಾನು ಹೇಳಿದ್ದು. ಕಮಲೆಯನ್ನು ನೋಡಿದಿರಾ ? "

" ನೋಡದೆ ಏನು ? ಈಗ ಮೈ ಹಿಡಿದಿದೆ ಅವಳಿಗೆ. "

" ಅದೇ, ಈಗವಳಿಗೆ ಮೂರು ತುಂಬಿದವು. "

" ನಾನೇನು ಬಲ್ಲೆನವ್ವಾ, ದೇವರು ದೊಡ್ಡವನು. 'ಅವಳಿ'ದ್ದರೆ ಇದೆಲ್ಲ ತಿಳಿಯುತ್ತಿತ್ತು. ನನಗೆ ಹೇಗೆ ತಿಳಿಯಬೇಕು ? "

" ಕಾಕಾ, ಇನ್ನು ನೀವಿಲ್ಲೇ ಇರಬೇಕಂತೆ ! "

" ಯಾರು ಹೇಳಿದರು ಪ್ರಭಾ ? "

" ಯಾರೇಕೆ ಹೇಳಬೇಕು ವೆಂಕಟರಾವ್, ನೀವು ನಿಂತು ನೋಡಿಕೊಳ್ಳಬಾರದೇ ? ಅವರಿಗೆ ಮತ್ಯಾರಿದ್ದಾರೆ ? " ಸೀತಾರಾಮರಾಯರೆಂದರು.

" ನಾನೇನು ನೋಡಿಕೊಂಡೇನು ರಾಯರೀ, ಎಲ್ಲಾ ಆ ಪಂಢರೀ ನಾಥನ ಇಚ್ಛೆ. ನಾನು ಇಂದು ಇದ್ದರಿ ಇದ್ದೆ; ನಾಳೆ ಹೊರಟರಿ ಹೊರಟೆ. "

" ಹಾಗೇಕನ್ನುತ್ತೀರಿ ಕಾಕಾ ? ಕಮಲೆಗೆ ದುಃಖವಾಗುವದಿಲ್ಲವೇ ನೀವು ಹಾಗಂದುಕೊಂಡರಿ ? "

" ನೀವಿದ್ದೀರಲ್ಲ ತಾಯೀ. ಎಲ್ಲಾ ನಿಮ್ಮನ್ನು ಕೂಡಿದೆ. ನಾನು ಯಾತ್ರೆ ಮಾಡಿ ನಿಮ್ಮೆರಡು ಮನೆಗಳಿಗೂ ಪುಣ್ಯ ಹಂಚುತ್ತೇನೆ. ನನ್ನದಷ್ಟೆ ಕೆಲಸ. ಕುಸುಮಕ್ಕ, ನೀನೇ ಇಂದು ಕಮಲೆಗೆ ತಾಯಿಯ ಸ್ಥಳದಲ್ಲಿದ್ದೀ. ಸೀತಾರಾಮರಾಯರು ನನ್ನ ಸ್ಥಳದಲ್ಲಿರಲಿ—ನನಗದೇ ಸಾಕು. ' ಅವಳು ' ಇದ್ದಿದ್ದರಿ ಆ ಮಾತೇ ಬೇರೆಯಾಗಿತ್ತು. ಇದ್ದ ಒಬ್ಬ ಮಗನೂ ದಕ್ಕಲಿಲ್ಲ— ಈ ಪಾಪಿಗೆ. ನನಗೆ ಇದೂ ಮನೆ; ಅದೂ ಮನೆ. ಹಾಗೆ ಕೇಳಿದರೆ ನನಗೆ ಯಾವುದೂ ಮನೆಯೇ ಅಲ್ಲ. ಭಗವಂತನ ಪಾದ ಸೇರಿ, ಅಲ್ಲಿಯೇ ಇರುವ ' ಅವಳ 'ನ್ನು ಕೂಡಿಕೊಳ್ಳುತ್ತೇನೆ. " ಎನ್ನುತ್ತ ವೆಂಕಟರಾಯರು ಕಣ್ಣೀರು ಗರೆದರು.

ಕಮಲೆ ಬಂದು ಬಾಗಿಲಲ್ಲಿ ನಿಂತುದನ್ನು ನೋಡಿ, ಕುಸುಮೆ

" ಬಾ, ಕಮಲ " ಎಂದಳು.

" ಕಮೂ ಬಂದಳೇ ? ಇಂದು ಶನಿವಾರ. ನಾನು ಸಪ್ತಾಪುರಕ್ಕೆ ಹೋಗಿ ಪ್ರಾಣದೇವರ ಪಾದಕ್ಕೆ ಬಿದ್ದು ಬರುತ್ತೇನೆ " ಎನ್ನುತ್ತ ವೆಂಕಟ ರಾಯರು ಎದ್ದರು.

" ಕಾಕಾ, ನಾವೂ ಬರುತ್ತೇವೆ; ಮಾಮಾ ಬರಲಿ " ಎಂದು ಪ್ರಭೆ ಅಂದರೆ

" ನೀವು ಬರ್ರಿ. ನಿಮ್ಮದು ವಾಕಿಂಗು. ನನ್ನದು ಅದೇ ಆಯುಷ್ಯದ ದಾರಿ. ನನ್ನಷ್ಟಕ್ಕೇ ನಾನು ಹೋಗಿ ಬರುತ್ತೇನೆ. " ಎಂದು ಹೊರಟೇಬಿಟ್ಟರು.

" ಕೂತುಕೋ ಕಮಲ. "

ಕಮಲೆ ಮ್ಲಾನಳಾಗಿ "ಅಪ್ಪ ಅಳುತ್ತಿದ್ದರೇ ಕುಸುಮಕ್ಕ ?" ಎಂದಳು.
" ಹುಚ್ಚೀ, ಅವರ ಅಳುವೇನು ? ನಗುವೇನು ? ಎರಡೂ ಅಷ್ಟೇ. ಬಾ, ಕೂತುಕೋ. ಪ್ರಭಾ, ನೋಡು—ಒಳಗೆ ಚಹಾ ಇಟ್ಟಿದ್ದೆ. ಕಮಲೆಗೆ ಕೊಡು."

" ನನಗೆ ಈಗ ಬೇಡ ಕುಸುಮಕ್ಕ " ಎಂದು ಕಮಲೆ ಕಣ್ತುಂಬಿದವ ಳಾಗಿ ಹೊರಕ್ಕೆ ಹೊರಟಳು. ಅದನ್ನು ಕಂಡು ಸೀತಾರಾಮರಾಯರು ಅಲ್ಲಿಂದೆದ್ದು "ಕಮಲಾಬಾಯಿ, ಹೀಗೆ ಅಳಬಾರದು. ನಾವಿಲ್ಲವೇ ?" ಎನ್ನುತ್ತ, " ದಿನಕರರಾಯರ ಮಿತ್ರರಂತೆ; ಹರಿಹರದಲ್ಲಿ ಸಿಕ್ಕಿದ್ದರು. ಅವರು ಮುಂಬಯಿಗೆ ಹೋಗುವಾಗ ಇಲ್ಲಿ ಇಳಿಯುತ್ತಾರಂತೆ; ದಿನಕರರಾಯರಿಗೆ ಹೇಳಬೇಕಾಗಿದೆ—" ಎಂದು ಎಡೆಯಾಡತೊಡಗಿದರು.

" ಯಾರಂತೆ ಅವರು ?"

" ಅವರ ಅಡ್ಡ ಹೆಸರು ಫಡಕೇ. ಮೈಸೂರ್ ಕಿರ್ಲೋಸ್ಕರದಲ್ಲಿದ್ದಾರೆ. ಅವರ ಮನೆಗೂ ಹೋಗಿದ್ದೆ. ಅವರ ಹೆಂಡತಿ ನಿನ್ನನ್ನು ನೋಡಿದ್ದಾರಂತೆ— ಕಮಲಾಬಾಯಿ; ಬೆಳಗಾವಿ ಸ್ಟೇಶನ್ನಿನಲ್ಲಿ ನೀನು ಹೀಗೇ ಅಳುತ್ತ ನಿಂತಿದ್ದಿ ಯಂತೆ."

ಕಮಲೆ ಕಣ್ಣೊರಸಿಕೊಂಡು ತವಕದಿಂದ, " ಯಾವಾಗಂತೆ ? ನಾನೇಕೆ ಅಳುತ್ತಿದ್ದೆ—ಸ್ಟೇಶನ್ನಿನಲ್ಲೇಕೆ ನಿಲ್ಲಲಿ ಮಾಮಾ ? " ಎಂದಳು.

" ಮತ್ತೆ ನೀನೇಕೆ ಅಳುತ್ತೀ ? ದಿನಕರರಾಯರನ್ನು ಕಳಿಸಲಾರದೆ ಅತ್ತಿರಬಹುದು. "

" ಹೋಗ್ರೀ ಮಾಮಾ, ನೀವೊಬ್ಬರ್ರು ಚೇಷ್ಟೆಗೆ ಕಡಿಮೆಯಾಗಿದ್ದಿರಿ " ಎಂದು ಕಮಲೆ ನಾಚಿಕೆ ತುಂಬಿದ ನಗೆ ನಕ್ಕು " ಪ್ರಭಾ " ಎಂದು ಒಳಗೆ ಹೋದಳು.

" ಕಮಲಕ್ಕ, ನಿನಗೆ ಒಳಗೆ ಪ್ರವೇಶವಿಲ್ಲ; ನೋ ಎಡ್ಮಿಶನ್. "

" ಯಾಕೆ ಪ್ರಭಾ ? "

" ನಾಯಿಗಳಿವೆ—ಎಚ್ಚರಿಕೆ " ಎಂದಳು ಪ್ರಭಾ.

" ಏನು ಹುಚ್ಚುಬಡಿಯುತ್ತೀ ಪ್ರಭಾ ? ಯಾವ ನಾಯಿ ? ಏನು ಮಾತು ? "

" ಸುಮ್ಮನೆ ಅಂದರೆ ನಿನಗೇಕಿಷ್ಟು ಸಿಟ್ಟು ಕುಸುಮಕ್ಕ ? "

" ಪ್ರಭಾ ಅಂದದ್ದು ನಿಜ. ಒಂದು ನಾಯಿ ಇಲ್ಲಿದೆ. ಒಂದು ಆಫೀಸಿಗೆ ಹೋಗಿದೆ; ಮನೆಯ ದಾರಿಯಲ್ಲಿರಬಹುದು. ಇನ್ನೊಂದು ನಾಯಿ ಎಲ್ಲಿದೆಯೋ ಹುಡುಕಬೇಕಾಗಿದೆ. " ಎಂದು ಸೀತಾರಾಮರಾಯರು ನಗೆಯಾಡಿದರು.

" ನಿಮಗೆ ಮುದುಕರಾದರೂ ಬುದ್ಧಿ ಬರಲಿಲ್ಲ."

" ಬುದ್ಧಿಯಿಲ್ಲವೆಂದೇ ನಾಯಿಯೆಂದೆ. ಅಲ್ಲ ಕುಮೀ, ನಾನು ಮುದುಕನಾದೆನೇ ?"

" ಮಾತುಮಾತಿಗೆ ಅರ್ಥ ಹಚ್ಚಬಾರದು."

ಪ್ರಭಾ ಚಹಾ ತರುತ್ತಿರುವದನ್ನು ನೋಡಿ ಸೀತಾರಾಮರಾಯರೆಂದರು:

" ಇರಲಿ ಬಿಡು; ಪ್ರಭೆಗೆ ಒಂದು ಮುಂಬಯಿ ನಾಯಿಯನ್ನು ನೋಡಿದರೆ ಹೇಗೆ ?"

ಪ್ರಭಾ ಕಮಲೆಗೆ ಚಹಾ ಕೊಡುತ್ತ, ನೀಲ್ಗಿರಿ ನಾಯಿ ಒಳ್ಳೇದು ಮಾಮಾ, ಅಲ್ಸೇಸಿಯಸ್–ಒಳ್ಳೇ ಜಾತಿ."

" ಪ್ರಭೀ, ನಿನ್ನ ನಾಲಿಗೆಗೆ ಬರೆ ಎಳೆಯಬೇಕು." ಕುಸುಮೆ ಸಿಟ್ಟು ತಡೆಯದೆ ವಸಕ್ಕನೆ ನುಡಿದಳು.

" ಯಾಕೆ ಅಕ್ಕ, ನನ್ನನ್ನು ಕಂಡು ಯಗರಾಡುತ್ತೀ ?"

" ನಾಯಿತನ ಅವಳಲ್ಲೂ ಬಂದಿದೆ."

" ನಿಮ್ಮ ಪುಣ್ಯ—" ಎಂದು ಕುಸುಮೆ ಎದ್ದಳು.

" ಕೂತುಕೊಳ್ಳೇ—ನಿಮ್ಮ ತಂಗಿಯ ವರದ ಬಗ್ಗೆ ಮಾತಾಡಿದರೆ ನೀನೇ ಹೊರಡುತ್ತೀಯಲ್ಲ ? ಫಡಕೇ ಹೇಳಿದರು : ಮುಂಬಯಿಯಲ್ಲಿ ಕಿರ್ಲೋಸ್ಕರ ಸೇಲ್ಸಮನ್ ಒಂದು ವರವಂತೆ ! ಹುಡುಗ ಒಳ್ಳೇ ಉಕ್ಕಿನಂತಿದ್ದಾನಂತೆ !"

" ಕಿರ್ಲೋಸ್ಕರ ಎಂದರೆ ಕಬ್ಬಿಣವೇ ಗತಿ"

" ಪ್ರಭಾ, ನೀನು ಎಲ್ಲದಕ್ಕೂ ನಡುವೆ ಮಾತಾಡಬಾರದವ್ವ—ಸುಮ್ಮನಿರು."

" ಅಕ್ಕ, ನಾನು ಹೊರಗೇ ಹೋಗುತ್ತೇನೆ. ಇಂದು ನಿನಗೇನೋ ಆಗಿದೆ. ಬಾ, ಕಮಲಕ್ಕ, ನಿಮ್ಮ ಮನೆಗೆ ಹೋಗೋಣ." ಎಂದು ಪ್ರಭಾ ಕಮಲೆಯ ಭುಜ ತಟ್ಟಿದಳು. ಗೇಟಿನ ಸಪ್ಪಳ ಕೇಳಿ ಕಮಲೆ ಎದ್ದಳು.

ದಿನಕರ ಊಲನ್ ಸೂಟ್ ಧರಿಸಿದವನು ಕಾಲೆಳೆದುಕೊಂಡು ಬಂದ.

" ಕಮಲಕ್ಕ, ನನಗಿನ್ನು ನಿನ್ನ ಮನೆಯಲ್ಲೂ ಪ್ರವೇಶವಿಲ್ಲ."

" ಯಾಕೆ ಪ್ರಭಾ, ಬಾ" ಎಂದು ಕಮಲೆ ಅವಳನ್ನೆಳೆದುಕೊಂಡು ಹೋದಳು.

## ೨೧

ಫಡಕೆ ದಂಪತಿಗಳು ಹರಿಹರದಿಂದ ಮುಂಬಯಿಗೆ ಹೋಗುವಾಗ ಧಾರವಾಡದಲ್ಲಿ ಇಳಿದರು. ಸೀತಾರಾಮರಾಯರ ಮೂಲಕ ದಿನಕರನಿಗೆ ಹೇಳಿ ಕಳಿಸಿದ್ದಲ್ಲದೆ ತಾವು ಬರುವ ಗಾಡಿ ತಿಳಿಸಿದ್ದರಿಂದ ದಿನಕರ ಕಮಲೆಯೊಂದಿಗೆ ಸ್ಟೇಶನ್ನಿಗೆ ಹೋಗಿ ಸ್ವಾಗತಿಸಿ ಮನೆಗೆ ಕರೆದುಕೊಂಡು ಬಂದ. ಒಂದೂಟ ಅವರಲ್ಲಿ ಮೊದಲೇ ಮಾಡಿಬಂದ ಸೀತಾರಾಮರಾಯರು ಅವರಿಗೆ ತಮ್ಮಲ್ಲಿ ಉಳಿದುಕೊಳ್ಳಲು ಕೇಳಿಕೊಂಡರೂ ದಿನಕರನ ಗಾಢ ಗೆಳೆತನ ಹಳೆಯದಾದುದ ರಿಂದ ಅವರು ದಿನಕರನ ಅತಿಥಿಯಾಗಿಯೇ ಉಳಿದರು.

ಅವರ ಮಗು ಉಲ್ಲಾಸ ಈಗ ಹರಿದಾಡುವಂತಾಗಿದ್ದ. ಕಮಲೆ ಅವ ನನ್ನು ಬಿಟ್ಟೂಬಿಡದೆ ಎತ್ತಿಕೊಂಡೇ ತನ್ನ ಕೆಲಸಮಾಡುತ್ತಾಳೆ. ಪ್ರಭೆ ಬಂದು ಕಮಲೆಗೆ ನೆರವಾದಳೆಂದೇ ಅತಿಥಿಗಳ ಸತ್ಕಾರದಲ್ಲಿ ಯಾವ ಲೋಪವೂ ಒದಲಿಲ್ಲ.

ಕಮಲೆ ಬಸುರಿಯೆಂದು ತಿಳಿದು ಶ್ರೀಮತಿ ಫಡಕೇ ಫಲ್ಗೂಬಾಯಿ ಒಂದು ಹಸಿರು ಬ್ಲೌಜ್ ತುಂಡು ತರಿಸಿ, ದಿನಕರನ ಮನೆಯಲ್ಲಿಯೇ ತಾನೇ ನಿಂತು ಬಾಸುಂದಿ-ಪೂರಿ ಅಡಿಗೆ ಮಾಡಿ ಕಮಲೆಯ ಬಯಕೆಯೂಟ ಆರಂಭಿ ಸಿದಳು. ಫಡಕೆ ಅವರು ಹುಬ್ಬಳ್ಳಿಗೆ ಹೋಗಿ ಬರುತ್ತ ಎರಡು ದಿನ ಕಳೆದರು. ಅವರದೂ ಸುಮ್ಮನೆ ಕೂಡುವ ಜೀವವಲ್ಲ. ತನ್ನ ಕಂಪನಿಯ ಕೆಲಸವೆಂದು ಹುಡುಕಿಕೊಂಡು ಹುಬ್ಬಳ್ಳಿಯಲ್ಲಿ ಒಂದು ಏಜನ್ಸಿ ಕುದುರಿಸಿದರು. ಮಹಾ ರಾಷ್ಟ್ರ ಮಂಡಳದಲ್ಲಿ 'ಏಕೀಕರಣದ ವ್ಯವಹಾರ ಮಾರ್ಗ'ವನ್ನು ಕುರಿತ ಉಪನ್ಯಾಸವೂ ಆಯಿತು. ಧಾರವಾಡದ ಮಂಡಳದವರೂ ದಿನಕರನ ಮನೆ ಯನ್ನು ಮುತ್ತಿ ಅವರನ್ನು ಹಿಡಿದರು. ಧಾರವಾಡದಲ್ಲಿ ಯಾವ ವಿಷಯ ಮಾತನಾಡಬೇಕೆಂದು ಫಡಕೆ ದಿನಕರನ ಕೂಡ ವಿಚಾರ-ವಿನಿಮಯಮಾಡಿ, ಕನ್ನಡ-ಮರಾಠೀ ಸಂಸ್ಕೃತಿ ಸಂವರ್ಧನವನ್ನು ಕುರಿತು ಒಂದು ಯೋಜನೆ ಯನ್ನು ಸಾದರಪಡಿಸಿದರು. ದಿನಕರ ವಿದ್ಯಾವರ್ಧಕ ಸಂಘದಲ್ಲಿ ಒಂದು ಚರ್ಚಾಕೂಟವನ್ನೇರ್ಪಡಿಸಿದ. ಹುಬ್ಬಳ್ಳಿಯ ಕೆ. ಪಿ. ಸಿ. ಸಿ. ಯ ಜನರೂ ಬಂದು ಭಾಗವಹಿಸಿದರು.

ಒಂದೇ ದಿನ ನಿಂತು ಹೋಗಬೇಕೆಂದ ಫಡಕೇ ದಂಪತಿಗಳಿಗೆ ಧಾರವಾಡ, ಹುಬ್ಬಳ್ಳಿ ಆತ್ಮೀಯ ತಂಗುಮನೆಗಳಾದವು. ಅವರ ಹಸನಾದ, ವಿಕಾರರಹಿತ ವಿಚಾರ ವೈಖರಿಯನ್ನು ಅಲ್ಲಿಯ ಜನ ಮೆಚ್ಚುವಂತಾಯಿತು.

ಸೀತಾರಾಮರಾಯರು ಫಡಕೇಯವರನ್ನು ಬೆಂಬಿಡದೆ ಅವರ ಎಲ್ಲ ಸಭೆಗಳಲ್ಲೂ ಮುಂದಾಗಿ ವ್ಯವಸ್ಥೆಗೆ ನಿಲ್ಲುವರು. ಅವರ ಸ್ವಭಾವದಲ್ಲಿಯ ಯಾವ-ಯಾವದೋ ಪ್ರಸಂಗ-ಪರಿಚಯಗಳಿಂದ ತಮ್ಮ ವ್ಯವಹಾರವನ್ನೂ ಹಿಗ್ಗಿಸಿಕೊಳ್ಳುವ ಅವರ ಪ್ರಯತ್ನವಾದಿತ್ವವನ್ನು ಫಡಕೆ ಮೆಚ್ಚಿದರು. ಸೀತಾರಾಮರಾಯರಲ್ಲಿ ಒಂದು ಸಮೀಚೀನ ಔತಣವೇರ್ಪಟ್ಟಿತು. ಅಂದು ಮಧ್ಯಾಹ್ನ ಮಾತು ಬೆಳೆದು ಮುಂಬಯಿಯ ಕಿರ್ಲೋಸ್ಕರ ನೇಲ್ಸಮನ್ ಕಾತರಕೀ ಅವರಿಗೆ ಪ್ರಭೆಯನ್ನು ತೋರಿಸುವ ಮಾತು ನಿರ್ಧಾರವಾಯಿತು. ಫಡಕೇ ಅವರು ಮುಂಬಯಿ ತಲಪಿದಮೇಲೆ ಕಾತರಕೀ ಅವರನ್ನು ಕಂಡು ಮಾತನಾಡಿ ಬರೆಯುವದಾಗಿ ಹೇಳಿ, ಪ್ರಭೆಯ ಭಿನ್ನ ಭಿನ್ನ ನಿಲುವೆಯ ಭಾವಚಿತ್ರಗಳನ್ನು ಜತೆಯಲ್ಲಿ ಒಯ್ದರು.

ಪ್ರಭೆ ತನ್ನ ಹಸನ್ಮುಖ, ಚೆಲ್ಲಾಟವೃತ್ತಿ, ಸಿನೆಮಾ ರಸಿಕತೆಗಳಿಂದ ಫಲ್ಗೂಬಾಯಿಯ ಮೆಚ್ಚಿಕೆ ಗಳಿಸಿದಳು. "ಕಾತರಕೀ ಭಾವುಜೀ ಫಡಕೇ ಅವರ ಕೈಯಲ್ಲಿ ಕೆಲಸ ಮಾಡಿದ್ದಾರೆ. ಇವರ ಮಾತು ಮೀರುವದಿಲ್ಲ-ಅವರು" ಎಂಬ ಭರವಸೆಯನ್ನು ಕುಸುಮೆಗೆ ನೀಡಿ ಫಲ್ಗೂಬಾಯಿ ಎಲ್ಲರನ್ನೂ ಮುಂಬಯಿಗೆ ಆಮಂತ್ರಿಸಿದಳು. 'ಕಾತರಕೀ (ಪಣ) ಸುಂದರ, ಸುಶಿಕ್ಷಿತ ತರೂಣ (ಆಹೆ)' ಎಂದು ಪ್ರಭೆಗೆ ಹೇಳಿ, 'ಕಾಳಜೀ ಕರೂ ನಕಾ' ಎಂದು ಸಮಾಧಾನಪಡಿಸಿದಳು.

ಕಮಲೆ ಕುಸುಮೆಯಂತೆ ಫಲ್ಗೂಬಾಯಿಯನ್ನೂ ಅಕ್ಕನಂತೇ ಕಂಡಳು. ಉಲ್ಲಾಸ ಅವಳ ಕನಸಿನ ಯಾವುದೋ ಆಸೆಯ ಪ್ರತೀಕನಾಗಿ ಕಂಡು ಅವಳನ್ನು ಉಲ್ಲಾಸದ ಚಿಂತನೆಯಲ್ಲಿ ತೂಗಾಡಿಸಿದ. ಅವರು ಊರಿಗೆ ಹೊರಟು ನಿಂತಾಗ ಒಂದು ಕುಟುಂಬದ ಬಂಧುಗಳು ಅಗಲುವಾಗಿನ ಬಂಧುರತೆಯನ್ನೂ ಆತ್ಮೀಯತೆಯನ್ನೂ ಮೆರೆದರು.

ಫಲ್ಗೂಬಾಯಿ ಕಮಲೆಯನ್ನು ಮುಂಬಯಿಗೆ ಆಮಂತ್ರಿಸುತ್ತ, ಅಲ್ಲಿ ತನ್ನ ಅಕ್ಕ ಡಾಕ್ಟರಳಿದ್ದುದನ್ನು ಹೇಳಿ, ನೀನು ಬಂದಾಗ ನಿನ್ನ ಬಸಿರು ಪರೀಕ್ಷಿಸಿ

ತಕ್ಕ ಆರೈಕೆ ಮಾಡಿನುವದಾಗಿ ಹೇಳಿ, ಚೊಚ್ಚಿಲವಾದ್ದರಿಂದ ದವಾ ಖಾನೆಯಲ್ಲಿಯೇ 'ಬಾಳಂತ ಪಣ' ಮಾಡಿಸಿಕೊಳ್ಳಲು ಸಲಹೆಯಿತ್ತಳು.

ಪ್ರಭೆ ದಾರಿಯಲ್ಲಿ ಕೊಲ್ಹಾಪುರಕ್ಕೆ ತಿರುಗಿಕೊಂಡು ಅಲ್ಲಿ ತನ್ನ ಮನೆ ಯಲ್ಲಿ ಒಂದು ದಿನ ಇದ್ದುಹೋಗಲು ಅತಿಥಿಗಳನ್ನು ಕೇಳಬೇಕೆಂದರೆ ಕುಸುಮೆ ತಾನಿರುತ್ತ ಪ್ರಭೆಯ ಈ ಆಸೆಗೆ 'ಅಧಿಕ ಪ್ರಸಂಗ'ವೆಂದು ಹೆಸ ರಿಟ್ಟು ಅದಕ್ಕೆ ಸಮ್ಮತಿಸಲಿಲ್ಲ. ಅವರ ಕೂಡ ಮಿರಜೀವರೆಗೆ ಹೋಗಿ ತಾನು ಕೊಲ್ಹಾಪುರಕ್ಕೆ ಹೋಗುತ್ತೇನೆಂದರೂ ಕುಸುಮೆ ಪ್ರಭೆಗೆ ಅವಕಾಶ ಕೊಡಲಿಲ್ಲ.

ಮುಂಬಯಿಗೆ ತಲಪಿದ ಫಡಕೆ ಅವರು ಕಾತರಕಿಯವರ ಫೋಟೋ ಕಳಿಸಿ ಅವರ ಗೋತ್ರ-ನಕ್ಷತ್ರಗಳನ್ನು ಸೂಚಿಸಿ 'ಅವರನ್ನು ಒಪ್ಪಿಸುವ ಭಾರ ತಮ್ಮ ಕಡೆಗಿರಲಿ' ಎಂಬ ಭರವಸೆ ಇತ್ತು 'ಒಮ್ಮೆ ಪ್ರಭೆಯನ್ನು ಮುಂಬ ಯಿಗೆ ಕರೆದು ತಂದು ತೋರಿಸುವದು ಉಚಿತ. ಕಾತರಕಿಗೆ ಈಗ ಬಿಡುವಿಲ್ಲ' ಎಂದು ಬರೆದರು.

ಸೀತಾರಾಮರಾಯರು ಕೊಲ್ಹಾಪುರಕ್ಕೆ ಓಡಿಹೋಗಿ ದಾದಾಗೆ ಎಲ್ಲ ವಿಷಯ ವಿವರಿಸಿ, ಫೋಟೋ ಕುಂಡಲಿಗಳನ್ನು ಒಪ್ಪಿಸಿದರು. ದಾದಾ ಕೂಡಿಸಿ ನೋಡಿ ದಿನಕರರಾಯರೊಡನೆ ಪ್ರಭೆಯನ್ನು ಕಳಿಸಲು ಸೂಚಿಸಿದ ಸೀತಾರಾಮರಾಯರ ಸಲಹೆಗೆ ಸಮ್ಮತಿಯಿತ್ತರು. ಸೀತಾರಾಮರಾಯರು ಧಾರವಾಡಕ್ಕೆ ಬಂದು ದಾದಾನ ಅಭಿಪ್ರಾಯ ತಿಳಿಸಿದರು.

ಕಸುವಮಾ ತನ್ನ ಪತಿಯೇ ಯಾಕೆ ಹೋಗಿ ಬರಬಾರದು ಎಂದು ವಿಚಾರಿ ಸಿದಳು. ತನಗೆ ಈಗ ವರುಷದ ಕೊನೆ; ಬಿಡುವಿಲ್ಲವೆಂದು ಅವರು ಹೇಳಿದ ಮೇಲೆ, ಕಮಲೆಯೂ ಜತೆಗೆ ಹೋಗುವದಾದರೆ ಪ್ರಭೆಯನ್ನು ಕಳಿಸುವದಾಗಿ ನಿರ್ಧರಿಸಿದಳು. ಕಮಲೆಯನ್ನು ಕಳಿಸುವ ಭಾರವೂ ಕುಸುಮೆಯದೇ ಆಯಿತು. ದಿನಕರ ಕರ್ತವ್ಯವನ್ನೂ ಭಾಗ್ಯವನ್ನೂ ಕಟ್ಟಿಕೊಂಡು ಮುಂಬಯಿಗೆ ಹೊರಡಲು ಸಮ್ಮತಿಸಿದ. ಕಮಲೆ ಮೊದಲು ಉಪಚಾರಕ್ಕೆ 'ನಾನೇಕೆ ?' ಎಂದರೂ ಪತಿಯು ಸಹಪ್ರವಾಸದ ಯೋಗವನ್ನು ಕಳೆದುಕೊಳ್ಳಲು ಆಗ ಹೇಗೆ ಬಯಸಿಯಾಳು? ಫಲ್ಗೂಬಾಯಿಯ ಆಮಂತ್ರಣವೂ ಬಸಿರ ಪರೀಕ್ಷೆಯ

ಕುತೂಹಲವೂ ಪ್ರಭೆಯ ಕಲ್ಯಾಣ ಚಿಂತನೆಯೂ ಅವಳಿಗೆ ನಿಮಿತ್ತ ವಾಗಿ ಕಂಡವು. ದಿನಕರನನ್ನು ಆ ಸಮಯ ಅಗಲಿರಲಾರದ ಅವಳ ಆಸೆ, ಮುಂಬಯಿ ಮಹಾನಗರವನ್ನು ಪತಿಯೊಡನೆ ಸುತ್ತುವ ಆಕಾಂಕ್ಷೆಗಳು ಅವಳ ಬಸಿರ-ಬಯಕೆಯ ಬಳ್ಳಿಯಾಗಿ ತನ್ನ ಸಂತಾನದ ಹೂವನ್ನು ಅಲ್ಲಿ ಅರಳಿಸಿ ನೋಡಿದಳು. ದಿನಕರನನ್ನು ತನ್ನ ಪ್ರೇಮಾಧಿಕಾರದ ಬಲೆಯಿಂದ ರಕ್ಷಿಸುವ ಕರ್ತವ್ಯವೂ ಅವಳ ಒಳದನಿಯ ಪ್ರೇರಣೆಯಾಯಿತು.

## ೨೨

ಮುಂಬಯಿಗೆ ಹೊರಡುವ ಮುಂದೆ ಕುಸುಮೆಯ ಸೂಚನೆಯಂತೆ ದಿನಕರ ಪ್ರಭೆ-ಕಮಲೆಯರೊಡನೆ ಕೊಲ್ಲಾಪುರಕ್ಕೆ ಹೋಗಿ ದಾದಾ ಅವ ರನ್ನು ಕಂಡು ಹೋಗಬೇಕಾಯಿತು. ಪ್ರಭೆ ತನ್ನ ಮನೆ, ತನ್ನ ಊರನ್ನು ಕಮ ಲೆಗೆ ತೋರಿಸುತ್ತ ಒಂದೆರಡು ಚಿತ್ರ ಮಂದಿರಗಳಿಗೂ ಕರಕೊಂಡು ಹೋಗಿ ಸತ್ಕರಿಸಿದಳು. ಪ್ರಭೆಯ ಸಿನೆಮಾ ಹುಚ್ಚಿಗೆ ಕೊಲ್ಲಾಪುರ ಹೇಗೆ ಕಾರಣ ವಾಗಿದೆಯೆಂಬುದನ್ನು ಕಮಲೆ ಪ್ರತ್ಯಕ್ಷ ಅನುಭವದಿಂದ ಕಂಡುಕೊಂಡಳು. ಪ್ರಭೆಯ ತಾಯಿ ಕಮಲೆಯನ್ನು ವಾತ್ಸಲ್ಯದಿಂದ ನೋಡಿಕೊಂಡರು. ದಾದಾ ಅವರು ಮಿರಜೀವರೆಗೆ ಬಂದು ಮಗಳನ್ನು, ದಿನಕರ-ಕಮಲೆಯರನ್ನು ಬೀಳ್ಕೊಟ್ಟರು. ಮತ್ತೆ ಮತ್ತೆ ಜೋಕೆ-ಎಚ್ಚರಗಳನ್ನು ಹೇಳಿ, " ದಿನಕರ ರಾವ್, ಬರುವಾಗ ಕಾತರಕೀ ಅವರನ್ನು ಕರೆದುಕೊಂಡೇ ಬನ್ನಿರಿ. ನಾವೂ ಒಮ್ಮೆ ನೋಡಿದಂತಾಗುತ್ತದೆ. ಮುಂದೆ ಅವರ ಹಿರಿಯರು ಯಾರೋ ಕೇಳಿ ಮಾತು ಮುಗಿಸಿದರಾಯಿತೆಂ"ದು ಸೂಚಿಸಿದರು.

ದಿನಕರ ಪುಣೆಯಲ್ಲಿದ್ದ ತನ್ನ ಸ್ನೇಹಿತನಿಗೂ, ಮುಂಬಯಿಗೆ ಶ್ರೀ. ಫಡಕೆ ಯವರಿಗೂ ಬರುವ ದಿನ, ಗಾಡಿ ತಿಳಿಸಿದ್ದ. ಪುಣೆಯ ಗೆಳೆಯ ಮಧುಕರ, ಬೆಳಗ್ಗೇ ಗಾಡಿಯ ಹತ್ತಿರ ಬಂದು ಇವರನ್ನು ಹುಡುಕಿ ಒಂದು ದಿನ ನಿಂತು ಹೋಗಲು ವಿನಂತಿಸಿದ. ತಿರುಗಿ ಬರುವಾಗ ಇಳಿಯುವದಾಗಿ ಮಾತು ಕೊಟ್ಟು ದಿನಕರ ತನ್ನ ಪರಿವಾರದೊಡನೆ ಮುಂಬಯಿ ಗಾಡಿ ಹತ್ತಿದ. ಬರುವ

ದಿನ-ಗಾಡಿ ಮುಂದಾಗಿ ತಪ್ಪದೇ ತಿಳಿಸಲು ಮಧುಕರ ದಿನಕರನನ್ನು ಕೇಳಿ ಕೊಂಡ.

ಕಮಲೆ ಮುಂಬಯಿಯನ್ನು ಕೇಳಿ ತಿಳಿದಿದ್ದಳು ಮಾತ್ರ; ಪ್ರಭೆಯೂ ಅಷ್ಟೇ. ಆದರೆ ಈ ರೈಲಿನ ಯಾತ್ರೆ ಅವರಿಗೆ ಬೇರೊಂದು ಲೋಕದ ಸಂಚಾರ ವಾಯಿತು. ಆ ನೂಕು-ನುಗ್ಗಲು ಜನ, ಆ ತಿಂಡಿ-ತೀರ್ಥ ಮಾರುವ ಹುಡು ಗರು, ಗಂಡು-ಹೆಣ್ಣಿನ ಭೇದವೆಣಿಸದ ಆ ಮುಟ್ಟಿ-ತಟ್ಟುವ ಎಳೆದಾಟಗಳು ಕಮಲೆಗೆ ಗಾಬರಿಗೊಳಿಸಿದರೆ, ಪ್ರಭೆಗೆ ತಾನು ಕೇಳಿದ, ಓದಿದ, ಸಿನೆಮಾ ಗಳಲ್ಲಿ ನೋಡಿದ ಚಿತ್ರಗಳ ವಾಸ್ತವ ದರ್ಶನವಾಗಿ ಅವಳ ಕುತೂಹಲವನ್ನು ಕೆರಳಿಸಿದವು. ಅವಳು ಕೂತಲ್ಲಿ ಕೂಡದೆ ನಿಂತಲ್ಲಿ ನಿಲ್ಲದೆ—ಕಿಟಕಿಯಲ್ಲಿ ಮುಖವಿಟ್ಟು 'ಕಮಲಕ್ಕ ಅಲ್ಲಿ ನೋಡು, ಇಲ್ಲಿ ನೋಡು'—ಎನ್ನುತ್ತ ಲೋಣಾವಳಾದ ಸುಂದರ ಪ್ರದೇಶವನ್ನು, ಖಂಡಾಳೆ ಘಟ್ಟದ ಆ ಬೊಗದೆ ಗಳನ್ನು ಸಾರಿ ಸಾರಿ ತೋರಿಸಿದಳು.

"ಮಾಮಾ, ಕಾರ್ಲಾ ಇಲ್ಲಿಂದ ಹತ್ತಿರವಂತೆ. ಬರುವಾಗ ಯಾಕೆ ನೋಡಬಾರದು ?'' ಎಂದಳು. ಕರ್ಜತದಲ್ಲಿ ಚೂಡಾದ ಪುಡಿಕೆ ಕೊಂಡಳು. ಕಲ್ಯಾಣ ಬಂದಾಗ "ಎಷ್ಟು ಗಾಡಿಗಳು– !" ಎನ್ನುತ್ತ "ಕಮಲಕ್ಕ, ಮುಂಬೈ ಇಲ್ಲಿಂದ ಸುರುವಾಯಿತು ನೋಡು '' ಎಂದಳು.

ದಿನಕರ ಪುಣೆಯುವರೆಗೆ ಉಲ್ಲಾಸದಲ್ಲಿದ್ದವನು ದೊಡ್ಡ ಗಾಡಿ ಹತ್ತಿದ ಮೇಲೆ ನಿಮಿತ್ತಕ್ಕೆ ಹಾ, ಹೂ ಎನ್ನುತ್ತ ಅಂತರ್ಮುಖಿಯಾಗಿ ಕುಳಿತಿದ್ದ. ಕಮಲೆಗೂ ಪ್ರವಾಸದ ಉಲ್ಲಾಸವಿತ್ತು. ಆದರೆ ಪತಿಯ ಈ ವಿಮನಸ್ಕತೆಗೆ ಕಾರಣ ಹುಡುಕುವದರಲ್ಲೇ ಅವಳು ಸೋತಳು. "ಚಹಾ ಕುಡಿಯುತ್ತೀರಾ? ಚೂಡಾ ಚೆನ್ನಾಗಿಲ್ಲವೇ ?" ಎಂದು ಕೇಳಿದರೆ ಅವನು ಈಗ ಯಾವುದೂ ಬೇಡವೆಂದು ಒಂದೇ ಮಾತಿನ ಉತ್ತರ ಕೊಡುತ್ತಿದ್ದ. "ಯಾಕೆ ಹೀಗಿದ್ದೀರಿ? ಹೀಗಾದರೆ ಯಾಕೆ ಕರಕೊಂಡು ಬಂದಿರಿ ?" ಎಂದು ಕೇಳಬೇಕೆಂದವಳು ಮಂದಿಯ ನಡುವೆ ಬೇಡವೆಂದು ಅವನ ಮುಖವನ್ನೇ ನೋಡುತ್ತ ಕೂತಳು.

ದಾದರ ಸ್ಟೇಶನ್ನಿಗೆ ಫಡಕೆ ದಂಪತಿಗಳು ಬಂದು ಇವರನ್ನು ಮನೆಗೆ ಕರೆದೊಯ್ದರು. ಕಮಲೆ ಪ್ರವಾಸದಲ್ಲಿ ಆಯಾಸಗೊಂಡಂತೆ ಕಂಡಳು. ಪ್ರಭೆಯ ಉತ್ಸಾಹ ಮೇರೆದಪ್ಪಿದಂತಿತ್ತು. ಫಡಕೇ ಮಾಮಾನನ್ನು ಅವಳು

ಮುಂಬಯಿಯ ಸುದ್ದಿಗಾಗಿ ಎಡಬಿಡದೆ ಕಾಡಿದಳು. ' ವ್ಹಿ. ಟಿ. ಎಲ್ಲಿ ? ಬಾಂಬೇ ಟಾಕೀಸ್ ಸ್ಟುಡಿಯೋ ಇರುವದು ಮಲಾಡವಂತೆ ! ಅದಕ್ಕೆ ಒಮ್ಮೆ ಕರೆದೊಯ್ಯಬೇಕು. ಚೌಪಾಟಿ, ಮಲಬಾರಹಿಲ್‌ಗಳನ್ನು ಯಾವಾಗ ನೋಡೋಣ ? ಹೊಸ ಚಿತ್ರ ನಾಲ್ಕಾದರೂ ತೋರಿಸಬೇಕು. ಸ್ನೇಹಪ್ರಭಾ, ಪೃಥ್ವಿರಾಜರು ದಾರಿಯಲ್ಲಿ ಸಿಕ್ಕರೆ ತೋರಿಸಿರಿ. ಆಪೆರಾ ಹೌಸಿನಲ್ಲಿ ಒಂದು ನಾಟಕ ನೋಡಬೇಕು ' ಎಂದು ಯಾವುದೋ ಕನಸು ಕೈಗೂಡಿದಂತೆ, ಎಂದೋ ಕಳೆದುಕೊಂಡ ಭಾಗ್ಯ ದೊರೆತಂತೆ ಹರಟುತ್ತಿದ್ದಳು. ಫಲ್ಗೂಬಾಯಿಗೆ ಕಮಲೆಯ ವಿರಾಮದ ಅವಸರವಾದರೆ, ಫಡಕೇ ಅವರು ತಮ್ಮ ಉತ್ತರಗಳಿಂದ ಹೇಗೆ ಪ್ರಭೆಗೆ ಬಾಯಿಥಡಿ ಹಾಕಬೇಕೆಂದು ಚಿಂತಿಸುತ್ತಿದ್ದರು. ಆಗಾಗ ದಿನಕರನ ಕೂಡ ಸಲ್ಲಾಪಿಸುತ್ತ, ಪ್ರಯಾಣದ ಸುದ್ದಿ ಕೇಳುತ್ತ ಮನೆಗೆ ಕರೆತಂದರು.

ಕಾತರಕಿಯೂ ಅಲ್ಲೇ ಬಂದಿದ್ದ. ಕಮಲೆ ಪ್ರಭೆಗೆ ಕುಸುಮೆಯ ಸ್ಥಳದಲ್ಲಿ ನಿಂತು ಎಚ್ಚರಿಸಿದಳು. ' ಬಹಳ ಮಾತಾಡಬಾರದು '— ಎಂದರೆ ' ಇದು ಮುಂಬಯಿ ಕಮಲಕ್ಕ' ಎನ್ನುತ್ತಾಳೆ. ' ಹೌದು; ನೀನಿಲ್ಲಿ ಕನ್ನೆಯಾಗಿ ವರನ ಮುಂದೆ ನಿಲ್ಲಲು ಬಂದಿದ್ದೀ' ಎಂದು ಕಮಲೆ ಅಧಿಕಾರ ನಡೆಸಬೇಕಾಯಿತು. ಪ್ರಭೆಗೆ ಇದು ಒತ್ತಾಯದ ಮಾಘಸ್ನಾನವೇ ಆಯಿತು. ತನ್ನ ಮಾತಿನ ಚಪಲವನ್ನು, ಮನಸ್ಸಿನ ಕುಣಿತವನ್ನು ಅವಳು ಬಹಳ ಕಷ್ಟದಿಂದ ಅದುಮಿಕೊಳ್ಳಬೇಕಾಯಿತು.

ಊಟ-ವಿಶ್ರಾಂತಿಗಳಾದ ಮೇಲೆ ದಿನಕರ ಫಡಕೆಯವರಿಗೆ ದಾದಾನ ಸಂದೇಶ ಹೇಳಿದ. ಅವರು ಕಾತರಕಿಗೆ ತಿಳಿಸಿದರು. ಕಾತರಕೀ ಫಲ್ಗೂಬಾಯಿಯನ್ನು ನೋಡಿದ. ಅವನ ಮನದಿಂಗಿತವನ್ನು ತಿಳಿದ ಫಲ್ಗೂಬಾಯಿ ಪತಿಗೆ— " ನೀವು ತಿಳಿದು ಮಾಡಿದ್ದು ಅವರಿಗೆ ಸಮ್ಮತಿ " ಎಂದು ಒಟ್ಟು ಮಾತು ಹೇಳಿದಳು. ಫಡಕೇ " ಮಾತು-ಕತೆಯೇನಿಲ್ಲ; ದಾದಾ ಅವರೊಮ್ಮೆ ನೋಡಬಯಸಿದ್ದಾರೆ. ನೀವೊಮ್ಮೆ ಕೊಲ್ಲಾಪುರಕ್ಕೆ ಹೋಗಿಬರಬೇಕು " ಎಂದು ಸೂಚಿಸಿ " ಎಂದು ಬಿಡುವಾಗುವದೆಂದು— ನಿಮ್ಮ ಆಫೀಸಿನ ಕೆಲಸ ನೋಡಿ— ಒಂದೆರಡು ದಿನದಲ್ಲಿ ತಿಳಿಸಿರಿ. ಇನ್ನು ನೀವು ನಿಮ್ಮ ಕೆಲಸಕ್ಕೆ ಹೋಗಬಹುದು " ಎಂದರು— ಕಾತರಕೀಗೆ.

ಅವನು ಹುಚ್ಚು ಹುಚ್ಚು ನಗುತ್ತ, ಅಲ್ಲೇ ಹೊರಟು ನಿಂತಂತೇ ಎಡೆ ಯಾಡಿದ; ಆದರೆ ಹೊರಡಲೇ ಇಲ್ಲ. ಫಲ್ಗೂ ವಹಿನಿ ಅದನ್ನು ಗ್ರಹಿಸಿ “ಕಾತರಕೀ ಭಾವುಜೀ, ಎರಡು ದಿನ ರಜಾ ತಗೊಂಡು ಬಿಡಿರಿ. ಇವರನ್ನೆಲ್ಲ ಮುಂಬಯಿ ಸುತ್ತಿಸಬೇಕು. ನನಗೆ ಉಲ್ಹಾಸ ಕೈ ಬಿಡುವದಿಲ್ಲ. ಅಲ್ಲದೇ ಅವನನ್ನು ಎಲ್ಲಾಕಡೆ ಎತ್ತಿಕೊಂಡು ತಿರುಗುವದೂ ಸನ್ನಿಂದ ಆಗುವದಿಲ್ಲ. ಅವರಿಗೇನೇನೋ ಮೀಟಿಂಗುಗಳು!” ಎಂದು ಕಾತರಕಿಯು ಎಡೆಯಾಟಕ್ಕೆ ತನ್ನ ರಕ್ಷೆಯನ್ನು ಒತ್ತಾಯದ ನಾಟಕೀಯತೆಯಿಂದ ಗಾಂಭೀರ್ಯದಲ್ಲಿಯೇ ಸೂಚಿಸಿದಳು. ಅವನು ‘ಆಗಲಿ’ ಎಂದೊಪ್ಪಿ ಒಂಟಿಗಾಲಿನಲ್ಲೇ ಸೇವೆಗೆ ಅಣಿಯಾದುದನ್ನು ಸೂಚಿಸಿದ.

ಕಮಲೆ ಮುಂಬಯಿ ಸುತ್ತಲಾರದೆ ದಣಿದಳು; ಪ್ರಭೆ ದಣಿಯದೆ ಸುತ್ತಿ ದಳು. ದಿನಕರನ ರೊಕ್ಕದ ಚೀಲಕ್ಕೆ ದೊಡ್ಡ ತೂತು ಬಿದ್ದಿತ್ತು. ಕಾತರಕೀ ಕೂಡ ಹಣ ಚೆಲ್ಲಾಡಿದ. ಕಮಲೆಯ ನೆಪದಿಂದ ಎಲ್ಲಾ ಸುತ್ತಾಟ ಟ್ಯಾಕ್ಸಿ ಯಲ್ಲೇ ಆಯಿತು.

ದಿನಕರ ಮಾತ್ರ ಈ ಇಡೀ ಸಂಚಾರದಲ್ಲಿ ವಿಮನಸ್ಕನಾಗಿದ್ದ. ಹುಳು ಕೊರೆದ ಹೂವಿನಂತೆ ಬಳಲಿದಂತಿದ್ದ. ಅವನನ್ನು ನೋಡಿ ಕಮಲೆ ‘ಹೀಗೇಕೆ?’ ಎಂದು ಕೇಳಬೇಕೆಂದರೆ ಇಡೀ ಮುಂಬಯಿ ವಾಸದಲ್ಲಿ ಅವರಿಗೆ ಏಕಾಂತವೇ ದೊರೆಯಲಿಲ್ಲ. ಇಬ್ಬರೆ ಆಗಿದ್ದು ಮನೆಯಲ್ಲಿ ಯಾವ ಉಪಚಾರ, ಸಂಕೋಚ ಗಳೂ ಇಲ್ಲದಂತಿದ್ದ ಅವರಿಗೆ ಈ ಜಾತ್ರೆಯ ಪ್ರಸಂಗ ಎಡಎಡಚಾಗಿತ್ತು. ದಿನಕರ ಪರಿಸರ ಮರೆತು ಒಮ್ಮೊಮ್ಮೆ ಮುದುಕುತ್ತಿದ್ದ. ಮುಂಬಯಿಯಲ್ಲಿ ಆ ಮುದುಕು ತೀರ ಸಹಜವಾಗಿತ್ತು. ಆದರೆ ಕಮಲೆಯ ಪ್ರಜ್ಞೆ ಜಾಗ್ರತವಾಗಿಯೇ ಇತ್ತು. ಅವಳು ಅಂಥದು ಯಾವುದಕ್ಕೂ ಅವಕಾಶ ಕೊಡದೆ ದಿನಕರನಿಂದ ಒಂದು ಮಾರು ದೂರವೇ ಸುಳಿಯುತ್ತಿದ್ದಳು. ಮಾತೂ ಅಷ್ಟೆ. ನೇರವಾಗಿ ಮಾತನಾಡುತ್ತಿದ್ದಿಲ್ಲ. ಗಂಡನಿಗೆ ತಿಳಿಸಬೇಕಾದುದನ್ನು ಪ್ರಭೆಯ ಮೂಲಕ ಹೇಳಿಸುವಳು. ತನ್ನ ಸಮ್ಮತಿ ಅಸಮ್ಮತಿಗಳನ್ನು ಫಲ್ಗೂಬಾಯಿಯ ಮೂಲಕ ಪ್ರದರ್ಶಿಸುವಳು.

ಕಾತರಕಿ-ಪ್ರಭೆ ಇವರ ಮುಂಗಾಟಕ್ಕೆ ಆಸ್ಪದ ಕೊಡದಂತೆ ಫಲ್ಗೂ ಬಾಯಿ, ಕಮಲೆಯರು ಎಷ್ಟು ಪ್ರಯತ್ನಿಸಿದರೂ ಅದು ಒಮ್ಮೊಮ್ಮೆ ಮೀರಿ

ಹೋಗುತ್ತಿತ್ತು. ಹೊರಕ್ಕೆ ಹೋದಾಗಲಂತೂ ನಾಯಿಗೆ ಸರವಳಿ ಹಚ್ಚಿ ಹಿಡಿದಂತೆ ಕಮಲೆ-ಫಲ್ಗೂಬಾಯಿಯರು ಪ್ರಭೆ-ಕಾತರಕಿಯವರನ್ನು ಜಗ್ಗಿ ಹಿಡಿದುಕೊಂಡರೂ ಅವರ ಚವಲದ ಎಗರಾಟಕ್ಕೆ ಒಮ್ಮೊಮ್ಮೆ ಕೈ ಸೋತಂತಾಗಿ ನಕ್ಕು ಬಿಡುವರು. ಆದರೆ ಕಮಲೆ ತನ್ನ ಹೊಣೆಯೆಂದು ಕುಸುಮೆ ಹೇಳಿದ್ದನ್ನು ಚಾಚೂ ತಪ್ಪದಂತೆ ನಡೆಸಲಾರದೆ ವಿವಶಳಾಗುವದನ್ನು ನೋಡಿದ ಫಲ್ಗೂಬಾಯಿ 'ಇದೆಲ್ಲ ನಡೆಯತಕ್ಕದ್ದೇ'—ಎಂದು ಹೇಳಿ ಸಮಾಧಾನಪಡಿಸುವಳು. 'ಯಾಕೆ ನಡೆಯಬೇಕು—ಈಗಾಗಲೇ ?' ಎಂದು ಕಮಲೆಯೆಂದರೆ 'ಹುಚ್ಚು ಹುಡುಗರು; ಮುಂಬಯಿಯ ವಾತಾವರಣ. ಆಡಲೇಳು' ಎನ್ನುವರು.

ಕಾತರಕಿ ಇವರೊಡನೆಯೇ ಕೊಲ್ಲಾಪುರಕ್ಕೆ ಹೊರಡಲು ಸಿದ್ಧನಿದ್ದ. ಆದರೆ ಫಡಕೆ ಬೇಡವೆಂದು ನೀರು ಹಾಕಿದರು. "ನಾವೂ ಹರಿಹರಕ್ಕೆ ಹೊರಡಬೇಕು. ಆಗ ಜತೆಗೇ ಬಾ. ಎಲ್ಲ ಮುಗಿಸಿ ಬಿಡೋಣ" ಎಂದರು.

ದಿನಕರನ ಪರಿವಾರ ಊರಿಗೆ ಮರಳುವಾಗ ಕಮಲೆ ಫಲ್ಗೂಬಾಯಿಯನ್ನು ಅಪ್ಪಿಕೊಂಡು ಅತ್ತುಬಿಟ್ಟಳು. ದಿನಕರ ಹೀಗೆಲ್ಲ ಅಂತರ್ಮುಖಿಯಾಗುವದು ಅವಳಿಗೆ ಹೊಸದಲ್ಲ. ಅಂಥ ಸಮಯದಲ್ಲೆಲ್ಲ ಕುಸುಮೆ ಉಪಾಯ ಹೇಳುತ್ತಿದ್ದಳು. ಇಂದದನ್ನು ಕಮಲೆ ಫಲ್ಗೂ ಅಕ್ಕನಿಂದ ಅಪೇಕ್ಷಿಸಿದರೆ ಅದು ಫಲಿಸಲಿಲ್ಲವಲ್ಲಾ,—ತನಗೆ ಏಕಾಂತದಲ್ಲಿ ಒಮ್ಮೆ ಅವರನ್ನು ನೋಡುವಂತಾಗಿದ್ದರೆ ಎಲ್ಲ ಸರಿಹೋಗಬಹುದಿತ್ತಲ್ಲಾ—ಎಂಬ ಚಿಂತೆಯಲ್ಲಿ ಬೆಂದಳು.

ಬೋರಿಬಂದರದಿಂದ ಇವರ ಮೂರು ಸ್ಥಳಗಳನ್ನು ಕಾಯ್ದಿರಿಸಿ, ಟಿಕೀಟು ತಂದು ಕೊಟ್ಟ ಕಾತರಕಿ ಇವರು ಹೊರಡುವಾಗ ಕಳಿಸಲು ಬರಲೇ ಇಲ್ಲ. ಹತ್ತು–ಹನ್ನೆರಡು ದಿನದಲ್ಲಿ ಹರಿಹರಕ್ಕೆ ಹೊರಟಾಗ ಕೊಲ್ಲಾಪುರಕ್ಕೆ ಹೋಗಿ ಬರುವದಾಗಿಯೂ, ದಾರಿಯಲ್ಲಿ ಧಾರವಾಡದಲ್ಲಿ ಇಳಿಯುವದಾಗಿಯೂ ಫಡಕೇ ದಂಪತಿಗಳು ಆಶ್ವಾಸನವಿತ್ತರು. ಗಾಡಿ ಹೊರಟಾಗ ಉಲ್ಲಾಸ ಕೈ ಅಲುಗಿಸುತ್ತ 'ಟಾ ಟಾ' ಮಾಡಿದ. ಫಡಕೆ ದಿನಕರನ ಕೈ ಕುಲುಕಿದರು. ಫಲ್ಗೂಬಾಯಿ ಕಿಟಕಿಯಲ್ಲಿ ಅಳುತ್ತ ಕುಳಿತ ಕಮಲೆಯ ತಲೆ ಸವರಿ

ಸಂತಯಿಸಿದಳು. ದಿನಕರ ಗಂಭೀರನಾಗಿಯೇ ಇದ್ದ. ಪ್ರಭೆ ಏನನ್ನೋ ಕಳೆದು ಕೊಂಡವಳಂತೆ ಸುತ್ತ ಕಣ್ಣಾಡಿಸಿ ಹುಡುಕುತ್ತಿದ್ದಳು.

ಕಲ್ಯಾಣಕ್ಕೆ ಗಾಡಿ ಬಂದಾಗ ಕಾತರಕಿ ಒಂದು ಹಣ್ಣಿನ ಬುಟ್ಟಿ ಹಿಡಿದು ಕೊಂಡು ಇವರ ರಿಝರ್ವ ಡಬ್ಬಿಯಲ್ಲಿ ನುಗ್ಗಿದ್ದನ್ನು ಕಂಡ ದಿನಕರ, "ಹೋ ಕಾತರಕಿ ! ನಾವು ಹೊರಟಾಗ ದಾದರದಲ್ಲಿ ನೀವು ಇಲ್ಲವಲ್ಲಾ ಎಂದು ಕೊಂಡೆವು. ಇಲ್ಲಾದರೂ ಬಂದು ಭೆಟ್ಟಿಯಾದಿರಲ್ಲ" ಎಂದ. ಪ್ರಭೆ ಮಾತಿಗೆ ನಿಲುಕದ ಭಾವದಲ್ಲಿದ್ದವಳು ಬೆದರುಗಣ್ಣಿನಿಂದ ಕಮಲೆಯನ್ನು ನೋಡಿದಳು. ಕಾತರಕಿ ಬುಟ್ಟಿ ಹೊತ್ತುಕೊಂಡೇ ನಿಂತುದನ್ನು ನೋಡಿ ಕಮಲೆ ಇದೇನೆಂದು ಕೇಳಿದರೆ 'ದಾರಿಯ ಬುತ್ತಿ' ಎಂದು ಕಮಲೆಗೆ ಒಪ್ಪಿಸಿ, ಅವನೂ ಪ್ರಭೆಯ ಬದಿಯಲ್ಲಿ ಖಾಲಿಯಿದ್ದ ಸ್ಥಳದಲ್ಲಿ ಕುಳಿತುಕೊಂಡ.

"ಪುಣೆಯವರೆಗೆ ಬಂದು ಬಿಡಬಾರದೇ, ಕಾತರಕೀ. ?"

"ಹೌದು; ನನಗೂ ಬರಬೇಕಾಗಿದೆ. ಇಂದು ಬೆಳಗ್ಗೆ ಆಫೀಸಿನ ಮೆಸೇಜ್ ಬಂತು. ಅವಸರದಲ್ಲಿ ಹೊರಟೆ" ಎಂದ.

ಏನವನ ಅವಸರವೋ ! ತಿದ್ದಿ-ತೀಡಿ ಸಿಂಗಾರಾಗಿದ್ದ. ಇವರಿಗಿಂತ ಮುಂಬೆಯೇ ಕಲ್ಯಾಣಕ್ಕೆ ಬಂದು ಕೂತಿದ್ದ. ವ್ಯವಸ್ಥಿತವಾಗಿ 'ದಾರಿ ಬುತ್ತಿ' ತಂದಿದ್ದ. ಮುನ್ನಾದಿನ ವ್ಹಿ.ಟಿ.ಗೆ ಮೂರು ಸೀಟು ರಿಝರ್ವ ಮಾಡಿಸಹೋದ ವನು ನಾಲ್ಕು ಹಿಡಿದು ಬಂದಿದ್ದ. ಎಂತಲೇ ಪ್ರಭೆಯ ಪಕ್ಕದ ಬರಿ ಜಾಗ ಆಕ್ರಮಿಸಲು ಅವನಿಗೆ ಅವಕಾಶವಾಯಿತು.

ಕಮಲೆ ಅವನ ಈ ಯೋಜನೆಯನ್ನು ಗ್ರಹಿಸದಿರಲಿಲ್ಲ. ದಿನಕರ ತಿಳಿದೂ ತಿಳಿಯದಂತೆ ವರ್ತಿಸಿದ. ಪ್ರಭೆ ಮಾತ್ರ ಯಾಕೋ ಮಾತು ಕಳೆದುಕೊಂಡು ಮಂಕಾಗಿ ಕುಳಿತಿದ್ದರೂ ಆಗಾಗ ಕಳ್ಳಗಣ್ಣಿನಿಂದ ಕಾತರಕಿಯನ್ನು ನೋಡು ತ್ತಿದ್ದಳು ಮಾತ್ರ. 'ಅವನು "ಹಿ-ಹೀ; ಹು-ಹೂ" ಎಂದು ನಗುತ್ತ ದಿನಕರ ನೊಡನೆಯೇ ಮಾತು ಬೆಳೆಸಬೇಕಾಯಿತು.

## ೨೩

ಪುಣೆಯ ಸ್ಟೇಶನ್ನಿಗೆ ದಿನಕರನ ಪರಿವಾರ ಹೊರಟ ಗಾಡಿ ಬಂದಾಗ ಗದ್ದಲವೋ ಗದ್ದಲ. ಗಾಡಿಯಿಂದ ಇಳಿಯುವದೂ ದುಸ್ತರವಾಗಿತ್ತು.

ಪ್ಲ್ಯಾಟಫಾರ್ಮು ತುಂಬ ಜನಸಮುದ್ರ ತೆರೆಯಾಡುತ್ತಿತ್ತು. ಅದೇ ಗದ್ದಲದಲ್ಲಿ ಮಧುಕರ ಎದ್ದುಬಂದಂತೆ ಇವರನ್ನು ಎದುರುಗೊಂಡು ದಿನಕರನನ್ನು ನಗುತ್ತ ಸ್ವಾಗತಿಸಿದ. ಹಮಾಲರಿಬ್ಬರು ಮಾತಿಲ್ಲದೆ ಸಾಮಾನು ಹೊತ್ತು ನಿಂತರು· ಕಾತರಕೀ ಅವರನ್ನು ತಡೆದು ಕರಾರು ಮಾಡಿದ. ಅವರು ಐದು ರೂಪಾಯಿ ಯೆಂದರು. ಮಧುಕರ ಅವರ ತಲೆಹೊರೆ ಇಳಿಸಿ ಹೋಗಹೇಳಿದರೆ "ನಾವಿಲ್ಲೀ ಇರುವ ಲೈಸನ್ಸದಾರರು; ಹೋಗುವವರು ನೀವು " ಎಂಬಂತೆ ನಿಂತಿದ್ದರವರು. ಮತ್ತೆ ಅವರನ್ನು ಕಾಯ್ದೆ, ಕಾನೂನು, ಬಿಲ್ಲಾಗಳಿಂದ ನಮನಿಸಬೇಕಾ ಯಿತು.

ಕಮಲೆ, ಪ್ರಭೆ ಕೈ-ಕೈ ಹಿಡಿದು ನಿಂತಿದ್ದರು. ಪ್ರಭೆ ಮುಂಬಯಿಯಲ್ಲಿ ಕೊಂಡು ತಂದ ಒಂದು ಥರ್ಮಾಸ್ ಫ್ಲಾಸ್ಕ ನೇಲಿಸಿದ್ದಳು. ಇನ್ನೊಂದು ಬದಿಗೆ ಒಂದು ಚೌಕು ಚೀಲ. ಕೈಯಲ್ಲಿ ಶೃಂಗಾರದ ಪರ್ಸ ಹಿಡಿದಿದ್ದಳು. ಕಮಲೆ ಒಂದು ಕೈಚೀಲ ಎತ್ತಿಕೊಂಡು ಮತ್ತೊಂದು ಕೈಯಿಂದ ಪ್ರಭೆ ಯನ್ನು ಗಟ್ಟಿಯಾಗಿ ಹಿಡಿದುಕೊಂಡು ಕಾಣದ ಭೂಮಿಯನ್ನು ಕಾಲಲ್ಲಿ ಹುಡುಕುತ್ತ ನಡೆದಳು. ಕಾತರಕೀ ಹಮಾಲರ ಹಿಂದಿನಿಂದ ಹೊರಟಿದ್ದ. ಮಧುಕರ-ದಿನಕರರು ಕಾಲೆಳೆಯುತ್ತ ಸಾಗಿದಾಗ ಎಲ್ಲೋ ಗದ್ದಲದಿಂದ, " ದಿನಕರ " ಎಂಬ ಕೂಗು ಕೇಳಿ ನಿಂತುಕೊಂಡು ಸುತ್ತಲೂ ನೋಡಿದರು.

ಆ ಜನ ಸಮುದ್ರದಲ್ಲಿ ಯಾರು ಕರೆಯುತ್ತಾರೆಂದು ತಿಳಿಯಬೇಕು ? ಮುಂಬಯಿ ಕಡೆಗೆ ಹೊರಟುನಿಂತ ಗಾಡಿಯ ಕಡೆಯಿಂದ ಒಬ್ಬ ಯುವತಿ ಕೈ ಮಾಡುತ್ತಿದ್ದುದನ್ನು ಮಧುಕರ ನೋಡಿದ. ದಿನಕರನಿಗೆ ತೋರಿಸಿದಾಗ ಅವನು ಚಕಿತನಾದ. ಹಿಂದೆ ನೋಡಿದರೆ ಕಮಲೆ-ಪ್ರಭೆ ತಡವರಿಸುತ್ತ ಬರು ತ್ತಿದ್ದಾರೆ. ದಿನಕರ ಮತ್ತೊಂದು ಕ್ಷಣದಲ್ಲಿ ಏನೋ ಹೊಳೆದಂತಾಗಿ ಹೊರಕ್ಕೆ ಹೋಗುವ ಅಟ್ಟ ಹತ್ತಲು ಹವಣಿಸುವಾಗ ಮಧುಕರ, " ನೋಡು—ದಿನ ಕರ, ಅವರು ನಿನ್ನನ್ನೇ ಕರೆಯುತ್ತಿರಬೇಕು" ಎಂದರೆ " ಅಲ್ಲ, ನನಗೆ ಅವಳು ಯಾರೂ ಅಲ್ಲ " ಎಂದು ಮುನ್ನಡೆದ.

ಇವನು ತಿರುಗಿಕೊಂಡುದನ್ನು ನೋಡಿ ಆಕೆ ಧಾವಿಸಿ ಬಂದಳು. ದಿನ ಕರನ ಕೈ ಹಿಡಿದು ತರುಬಿ ಮುಂದೆ ನಿಂತು—

" ದಿನಕರ, ನಾನು ಯಾರೆಂದೂ ನಿನಗೆ ತಿಳಿಯದೆ ?"

ದಿನಕರ ಅವಳನ್ನೇ ನೋಡಿ “ ನನ್ನ ಕೃಷ್ಣಾ !” ಎಂದ.

“ ನನ್ನ ದಿನೂ !” ಎಂದವಳು ಇವನ ಎರಡೂ ಕೈ ಹಿಡಿದುಕೊಂಡಳು. ಕಮಲಿ ಮುಂದೆ ಬಂದುದನ್ನು ನೋಡಿದ ದಿನಕರ ಅಪ್ರತಿಭನಾದ. ಅವಳನ್ನು ನೋಡಿ ಕೃಷ್ಣೆ “ ಇವಳಾರು ದಿನಕರ, ನಿನ್ನ ಹೆಂಡತಿಯೆ ?” ಎಂದಳು.

ದಿನಕರ ಉಸಿರು ಬಿಟ್ಟು “ ಹೌದು; ನನ್ನ ಕಮಲ ” ಎಂದ.

“ ಬಾ, ನನ್ನ ದಿನಕರನ ರಾಣಿ, ನೀನು ಭಾಗ್ಯವಂತೆಯಮ್ಮಾ” ಎಂದು ಅವಳನ್ನು ಸೆಳೆದು ಮುತ್ತಿಟ್ಟಳು ಕೃಷ್ಣಾ. ಒಂದು ಕೈಯಿಂದ ದಿನಕರನನ್ನೂ ಮತ್ತೊಂದರಿಂದ ಕಮಲೆಯನ್ನೂ ಹಿಡಿದುಕೊಂಡು ಕೃಷ್ಣೆ ಮುಂಬಯಿ ಗಾಡಿಯ ಕಡೆಗೆ ನಡೆದಳು. ಮಧುಕರ ಅಲ್ಲೇ ನಿಂತ. ಪ್ರಭೆ ಅರ್ಧದಾರಿ ಅವ ರನ್ನು ಹಿಂಬಾಲಿಸಿ ಮತ್ತೆ ಹಿಂದಿರುಗಿ ನೋಡಿದಳು. ಕಾತರಕಿ ಹಮಾಲ ರೊಡನೆ ಹೊರಗೆ ಹೋಗಿಬಿಟ್ಟಿದ್ದ. “ ಕಮಲಕ್ಕ ” ಎಂದು ಕೂಗಿಕೊಂಡಳು ಪ್ರಭಾ. ಕೃಷ್ಣೆಯ ಕೈಯಲ್ಲಿ ಸಿಕ್ಕು ಪರಾಧೀನೆಯಾದ ಕಮಲಿ ಹಿಂದಿರುಗಿ ನೋಡಿದಳು. ಪ್ರಭೆಯನ್ನು ಕರೆಯಲೂ ಅವಳಿಗೆ ಬಾಯಿ ಬರದು. ಕೃಷ್ಣೆಯೇ ನೋಡಿ, “ ಅವಳಾರು ? ನಿನ್ನ ತಂಗಿಯೆ ?” ಎಂದಳು.

ಹೌದೆಂಬಂತೆ ಕಮಲಿ ತಲೆ ಆಡಿಸಿದಳು. ‘ ಬಾ, ತಂಗೀ ’ ಎಂದು ಕೃಷ್ಣೆ ಅವಳನ್ನೂ ಕರೆದು ದಿನಕರನ ಕೈಬಿಟ್ಟು ಅವಳ ಕೈಹಿಡಿದಳು.

ಅವರು ಮುಂಬಯಿ ಗಾಡಿಯ ಬಳಿ ಬಂದಾಗ ಮೊದಲನೆಯ ತರ ಗತಿಯ ಡಬ್ಬಿಯ ಬಾಗಿಲಲ್ಲಿ ನಿಂತ ಸೈನಿಕ ವೇಷದ ತರುಣ—

“ ಎಲ್ಲಿ ಹೋಗಿದ್ದಿ, ಕೃಷ್ಣಾ—ಗಾಡಿಯ ಸಮಯವಾಯಿತು. ಇವ ರಾರು ?” ಎಂದು ಕಾತರದಲ್ಲಿ ಕೂಗಿಕೊಂಡ.

“ ಇವನು ನನ್ನ ದಿನಕರ; ಇವಳು ಅವನ ರಾಣಿ ಕಮಲಿ.”

“ ಯಾವ ಊರು ?”

“ ಅಂದು ನೀವು ಬೆಳಗಾವಿಯಿಂದ ನನ್ನನ್ನು ಕರೆದುಕೊಂಡು ಬಂದಿ ರಲ್ಲ—ಅದು ಇವರ ಮನೆ. ಆಗ ಇವ ಶಾಲೆಗೆ ಹೋಗಿದ್ದ.”

“ ಹೋ—ಅದೇ ! ಸಂತೋಷ. ದಿನಕರ, ಇವಳು ನಿನಗೆ ಅಕ್ಕನಂತೆ!”

“ ಹೌದು; ನನ್ನ ಅಬಚಿಯ ಮಗಳು.”

“ ಅದೇ—ನಿನಗಿಂತ ಮೂರುದಿನಕ್ಕೆ ಹಿರಿಯಳಂತೆ.”

" ಹೌದು."

"— ಯಾವ ಹೊತ್ತಿನಲ್ಲಿ ಬಂದಿರಲ್ಲ ? ನಾನೀಗ ಯುದ್ಧ ಮುಖಕ್ಕೆ ಹೊರಟಿದ್ದೇನೆ. ಇವಳ ಹುಚ್ಚನ್ನು ಬಿಡಿಸಿದವನು ನೀನೇ-ಅಂತೆ ! ನನ್ನ ಹುಚ್ಚನ್ನು ಅವಳು ಬಿಡಿಸಿದಳು."

ಒಂದನೆಯ ಗಂಟೆಯಾಯಿತು.

" ನಮ್ಮ ಮನೆಗೇ ಹೋಗು ದಿನಕರ. ಇವಳು ನಿನ್ನ ಹೆಂಡತಿಯೆ ? ಸಂತೋಷ ತಂಗೀ."

ದಿನಕರ ಮಾತಿಲ್ಲದೆ ನಿಂತಿದ್ದ.

' ಕಮಲಾ, ಇವರು ನನ್ನ ಯಜಮಾನರು; ಯುದ್ಧಕ್ಕೆ ಹೊರಟಿದ್ದಾರೆ. ತಿರುಗಿ ಬರ್ತಾರೆನ್ನು ಕಮಲ; ನಿನ್ನ ಕುಂಕುಮದ ಹುಡಿ ನನಗೆ ಹಚ್ಚು ಕಮಲ—" ಎಂದ ಕೃಷ್ಣೆ ಅಳುತ್ತಿದ್ದಳು.

ದಿನಕರ ಕೈಮುಗಿದು, " ಮತ್ತೆ ಯಾವಾಗ ನೋಡುವದು ?" ಎಂದು ಮಾತು ಹುಡುಕಿಕೊಂಡು ಕೇಳಿದ.

" ತಿರುಗಿ ಬಂದರೆ !"

ಕೃಷ್ಣೆ ಗಾಡಿ ಹತ್ತಿ " ಹಾಗನ್ನಬಾರದು—ನನ್ನ ಮುಂದೆಯೇ. " ಎನ್ನುತ್ತ ಪತಿಯ ಬಾಯಮೇಲೆ ಕೈ ಇರಿಸಿದಳು.

ಕಮಲೆಗೆ ಅಳು ತಡೆಯಲಿಲ್ಲ; ಬಿಕ್ಕಳಿಸಿದಳು. ಪ್ರಭೆ ಏನೂ ತಿಳಿಯ ದವಳಂತೆ ನಿಂತಿದ್ದಳು.

" ನಾನು ತಿರುಗಿ ಬರದಿದ್ದರೆ ಕೃಷ್ಣೆಗೆ ಯಾರೂ ಇಲ್ಲ—ದಿನಕರ."

" ಮತ್ತೆ ಅದೇ ಮಾತು ! ನೀನಾದರೂ ಹೇಳು ದಿನೂ."

" ನಾನು ಅನೇಕ ರಂಗಗಳಿಗೆ ಹೋಗಿದ್ದೇನೆ. ಇಂದೇಕೋ ಹೀಗಾ ಗಿದೆ ನೋಡು. "

" ಎಂದಿನಂತೇ–ತಿರುಗಿ- ಬರುತ್ತೀರಿ– " ದಿನಕರ ಒಂದೊಂದೇ ಶಬ್ದ ತುಂಡು ತುಂಡುಮಾಡಿ ಆಡಿದ.

ಮೇಜರ್ ಚಂದ್ರಕಾಂತ ಇಳಿದುಬಂದು ಕೃಷ್ಣೆಯನ್ನು ಚುಂಬಿಸಿದ. ಅವಳನ್ನು ದಿನಕರನ ಮುಂದೆ ಮಾಡಿ,

" ದಿನಕರ, ನಾನು ಬರದೆ ಹೋದರೆ— ಇವಳಿಗೆ........"

ಮುಂದೆ ಮಾತೇ ಬರಲಿಲ್ಲ ಅವನಿಗೂ.

ದಿನಕರನೂ ಅಳುತ್ತಿದ್ದ. ಕೃಷ್ಣೆ ಅವನ ಮುಂದೆಯೇ ನಿಂತಿದ್ದಳು. ಕಮಲೆ ಮುಂದೆ ಬಂದು ತನ್ನ ಹಣೆಯ ಕುಂಕುಮ ಮುಟ್ಟಿ ಅವಳ ಹಣೆಗೆ ಹಚ್ಚಿ—" ಅತ್ತಿಗೆ " ಎಂದಳು. ಮುಂದೆ ಅವಳಿಗೂ ಮಾತು ಬರಲಿಲ್ಲ.

ಯಾರು ಯಾರೋ ಸೈನಿಕ ವೇಷದ ಹಿಂಡು-ಹಿಂಡು ಜನ ಬಂದರು. ಎಲ್ಲರೂ ಒಂದೊಂದು ಮಾಲೆಯನ್ನು ಚಂದ್ರಕಾಂತನಿಗೆ ಹಾಕಿದರು. ಒಬ್ಬ ಜರದ ಗೋಟು ಕಟ್ಟಿದ ಅಂಗಿ ಹಾಕಿದ ಸಾಹೇಬ—ಮುಂದೆ ಬಂದು,

" ಚಂದ್ರಕಾಂತ್ ! ಎಲ್ಲಿ ನಿಮ್ಮ ಮನೆಯವರು ? " ಎಂದು ಕೇಳಿದ.

ಕೃಷ್ಣೆ ಅಲ್ಲೇ ಅಳುತ್ತ ನಿಂತಿದ್ದಳು. ಚಂದ್ರಕಾಂತ ಅವಳನ್ನು ತೋರಿಸಿ " ಬಾ, ಕೃಷ್ಣಾ " ಎಂದು ಕರೆದ.

" ಕೃಷ್ಣಾಬಾಯಿ, ಅಳಬಾರದು. ನೀವು ನಮ್ಮ ವಿಜಯಲಕ್ಷ್ಮಿ. ನಿಮ್ಮ ಕೈಯಿಂದ ಈ ಮಾಲೆ ಹಾಕಿಸಬೇಕೆಂದು ನಮ್ಮ ಅಪೇಕ್ಷೆ. " ಎನ್ನುತ್ತ ಅವಳ ಕೈಗೊಂದು ದೊಡ್ಡ ಹೂ-ಹಾರವನ್ನಿತ್ತ.

ಕೃಷ್ಣೆ ಅದನ್ನು ಎತ್ತಲಾರದೆ ಹಿಡಿದುಕೊಂಡಳು. ಚಂದ್ರಕಾಂತ ಅವಳ ಕ ವರೆಗೆ ಬಾಗಿದ. ಕೃಷ್ಣೆ ಮಾಲೆ ಹಾಕಿದಳು; ಬಾಗಿ ಅವನ ಚರಣಧೂಲಿ ಯನ್ನು ತಲೆಗೆ ಮುಡಿದುಕೊಂಡಳು.

ಗಾಡಿ ಸಿಳ್ಳು ಹಾಕಿತು; ಚಂದ್ರಕಾಂತ ಗಾಡಿ ಏರಿದ.

ದಿನಕರನ ಪರಿವಾರವೆಲ್ಲ ಸ್ತಬ್ಧವಾಗಿತ್ತು.

ಸೈನಿಕರೆಲ್ಲ ಕೂಗಾಡಿ ಕೈ ಬೀಸುತ್ತಿದ್ದರು.

## ೨೪

ಮಧುಕರನದು ಮನೆ ಮಾತ್ರವಿತ್ತು. ಗ್ರಹಲಕ್ಷ್ಮಿ ಒಮ್ಮೆಲೆ ಬಂದು ಬಿಟ್ಟಾಳೆಂದು ಅವನು ಮನೆಯೊಂದನ್ನು ಹಿಡಿದು ಇಟ್ಟಿದ್ದ. ಆದರೆ ಆ ಮನೆಯ ಯಜಮಾನನ ಮೇಲೆ ಯಾವ ಲಕ್ಷ್ಮಿಯ ದೃಷ್ಟಿಯೂ ಇನ್ನೂ ವಕ್ರಿಸಿದ್ದಿಲ್ಲ. ಸ್ಟೇಶನ್ನಿನ ಹೊರಗೆ ಬಂದಾಗ ದಿನಕರ ಎಲ್ಲಿಗೆ ಹೋಗುವದೆಂದು

ಮಧುಕರನನ್ನೇ ಕೇಳಿದ. ಸ್ಟೇಶನ್ನಿನಲ್ಲಿ ನಡೆದ ಗೊಂದಲ ನೋಡಿದ ಅವನು ಆ ಸಂತೆಯನ್ನು ತನ್ನಲ್ಲಿ ಬರಮಾಡಿಕೊಂಡು ಸತ್ಕರಿಸುವ ಧೈರ್ಯ ಕಳೆದು ಕೊಂಡಿದ್ದ. ಅಲ್ಲದೆ ಪ್ರಭೆಯ ಮುಖ ನೋಡಲು ಕಾತರಕಿಯೊಬ್ಬ ಬೆನ್ನು ಹತ್ತಿದ್ದ. ದಿನಕರನಿಗೆ ತನ್ನ ನೆನಪೇಕೆ ಆಗಲಿಲ್ಲವೆಂದು ಒಮ್ಮೆ ಮಧುಕರ ಯೋಚಿಸಿದನಾಗಲಿ, ಪೂರ್ವಾಪರವನ್ನರಿಯದ ಅವನು ಅದಕ್ಕೆ ಹೆಚ್ಚು ಮಹತ್ವ ಕೊಡಲಿಲ್ಲ.

' ಬಾದಶಾಹಿ 'ಗೆ ಹೋದರಾಯಿತೆಂದು ಕಾತರಕಿಯ ವಿಚಾರ. ಅವನು ಸ್ಟೇಶನ್ನಿನ ಘಟನೆಗೆ ಸಾಕ್ಷಿಯೂ ಆಗಿದ್ದಿಲ್ಲ; ಹಮಾಲರೊಡನೆ ಮೊದಲೇ ಹೊರಗೆ ಬಂದುಬಿಟ್ಟಿದ್ದ. ಈ ಮಧುಕರ ಯಾರೋ—ಇವನ ಮನೆಗೇಕೆ ಎಂದು ಅವನ ವಾದ.

ಕೃಷ್ಣಾ ದಿನಕರನಿಗೆ ಹೇಳಿದಳು:

" ನೀನು ನಿನ್ನ ಸ್ನೇಹಿತರಲ್ಲೇ ಹೋಗಬೇಕೆಂದರೆ ನನ್ನ ಅಡ್ಡಿಯೇನೂ ಇಲ್ಲ. ಆದರೆ ಹೋಟೆಲಿಗೆ ಹೋಗಬೇಕಾದ ಅಗತ್ಯವಿಲ್ಲ. ನನ್ನಲ್ಲಾದರೆ ನಿಮಗೆ —ನನ್ನದಲ್ಲದೆ ಇನ್ನಾವ ತೊಂದರೆಯೂ ಆಗಲಿಕ್ಕಿಲ್ಲ. ನೀವು ಎಲ್ಲಿಯೇ ಹೋಗಿರಿ; ಒಂದು ಸಲ ನನ್ನ ಮನೆಗೆ ಬಂದು ಹೋಗಬೇಕು. ಅವರೂ ಹೇಳಿದ್ದಾರಲ್ಲ— "

ದಿನಕರನ ಮನಸ್ಸು ಸ್ತಿಮಿತದಲ್ಲಿರಲಿಲ್ಲ. ಕೃಷ್ಣೆಯೋ—ಕಮಲೆಯೋ, ಮಧುಕರನೋ—ಕಾತರಕಿಯೋ ಯಾರಾದರೊಬ್ಬರು ಯಾವದಾದರೊಂದು ನಿರ್ಣಯ ತಕ್ಕೊಳ್ಳಬೇಕೆಂದು ಅವನು ಬಯಸಿದ್ದ. ಸ್ವಂತ ವಿಚಾರ ಅವನಿಗೆ ಆ ಕ್ಷಣಕ್ಕೆ ಸಾಧ್ಯವೇ ಇದ್ದಿಲ್ಲ.

ಸಾಧಾರಣ ಎಲ್ಲರದೂ ಹಾಗೇ ಆಗಿತ್ತು. ಆದರೆ ಕಮಲೆಯೇ ಈ ವಿವಂಚನೆಯನ್ನು ತೊಡೆದು ಹಾಕಿದಳು :

" ಮಧುಕರರಾಯರ ಮನೆ ಇನ್ನೂ ಪೂರ್ಣವಾಗಿಲ್ಲ. ನಾನೂ ಪ್ರಭಾ ಅತ್ತಿಗೆಯ ಮನೆಗೆ ಹೋಗುತ್ತೇವೆ. ನೀವು ಬೇಕಾದರೆ ಅಲ್ಲಿಗೆ ಹೋಗ ಬಹುದು."

" ಎಲ್ಲರೂ ನನ್ನಲ್ಲಿ ಬರಬಹುದು. ಮಧುಕರರಾಯರನ್ನು ಯಾರೂ ಕಾಯುವವರಿಲ್ಲವಾದರೆ ಅವರೂ ಬರಲಿ " ಎಂದಳು ಕೃಷ್ಣೆ.

ಕಾತರಕಿ ಬಾದಶಾಹೀಗೆ ತಾನೊಬ್ಬನೇ ಹೋಗಬೇಕಾದೀತೆಂದು ತನ್ನ ಅಭಿಪ್ರಾಯ ಮತ್ತೆ ಹೇಳಲಿಲ್ಲ. ದಿನಕರನಿಗೆ ಆ ನಂತೆ ಬೇಸರ ತಂದಿತು. ಕಾತರಕೀ, ಮಧುಕರ ತಮಗೆ ತಿಳಿದಂತೆ ಮಾಡಲಿ—ಎಂದು

" ಈಗಂತೂ ನಾವು ಕೃಷ್ಣಾನ ಮನೆಗೆ ಹೋಗುತ್ತೇವೆ. ನಿನ್ನಲ್ಲಿ ಒಮ್ಮೆ ಬಂದು ಹೋಗುತ್ತೇವೆ " ಎಂದು ದಿನಕರ ಮಧುಕರನಿಗೆ ಹೇಳಿದ. ಕಾತರಕೀ ಹೋಗಲಾರ, ಇರಲಾರದಂತಾಗಿದ್ದ. ಎಲ್ಲರೂ ಕೃಷ್ಣೆಯ ಮನೆಗೇ ಟ್ಯಾಕ್ಸಿ ಮಾಡಿಕೊಂಡು ಹೋದರು.

ಕೃಷ್ಣೆಯದು ಕ್ಯಾಂಪಿನಲ್ಲಿ ವಿಶಾಲವಾದ ಮನೆ. ಮುಂದೆ ದೊಡ್ಡ ಹೂದೋಟ. ಮನೆಯಲ್ಲಿ ಆಳು-ಕಾಳು, ಅಡಿಗೆಯವ ಎಲ್ಲ ಇದ್ದರು.

ಕೃಷ್ಣೆ ಅತಿಥಿ ಸತ್ಕಾರದಲ್ಲಿ ತನ್ನನ್ನು ತೊಡಗಿಸಿಕೊಂಡು ಗಂಡನ ಅಗಲಿಕೆಯನ್ನು ಮರೆತಂತೆ ಕಂಡಳು. ದಿನಕರನ ಕೂಡ ಮುಂಚಿನ ಸಲಿಗೆಯಲ್ಲೇ ಮಾತಾಡಿದಳು. ಕಮಲೆಯನ್ನೂ ಬಹುದಿನದ ಪರಿಚಿತಳಂತೇ ನೋಡಿಕೊಂಡಳು.

ಸಾಯಂಕಾಲ ಹೊರಕ್ಕೆ ಹೊರಟುನಿಂತ ಮಧುಕರ, ಕಾತರಕೀಯವರನ್ನು ದಿನಕರ ಕಳಿಸಹೋಗಿದ್ದ. ಕಾತರಕೀ ಮುಂಬಯಿಗೆಂದು ಸ್ಟೇಶನ್ನಿಗೇ ಹೋದ. ಮಧುಕರ ಮಾತ್ರ ದಿನಕರನನ್ನು ತನ್ನ ಬರೀ ಮನೆಗೆ ಕರೆದೊಯ್ದು ' ಇದನ್ನು ತುಂಬುವ ವಿಚಾರ ನಿನಗೇಕೆ ಬರಲಿಲ್ಲ ?' ಎಂದು ಕೇಳಿಯೇ ಬಿಟ್ಟ. " ನೀನು ಹೀಗೆ ಒಂಟಿಯಾಗಿದ್ದೀಯೆಂದು ಯಾಕೆ ತಿಳಿಸಲಿಲ್ಲ ? ಹೆದರಬೇಡ ಮಧೂ, ನಿನಗಾಗಿ ಒಂದು ಹೆಣ್ಣು ಎಲ್ಲೋ ಬೆಳೆದುನಿಂತಿದೆ. ನಿನ್ನ ನವಕರಿ ಹೋದ ದಿನವೇ ಬಂದು ಕೊರಳಿಗೆ ಬೀಳುತ್ತದೆ " ಎಂದು ದಿನಕರ ನಗೆಯಾಡಿದ.

ಪ್ರಭೆ ಕಾತರಕಿಯನ್ನು ಕಳಿದುಕೊಂಡ ಮೇಲೆ ಹೂದೋಟದಲ್ಲೇ ಆಟಕ್ಕೆ ನಿಂತಳು. ಒಳಗೆ ಒಂದರೆ ರೇಡಿಯೋ. ಅವಳು ಇನ್ನೊಬ್ಬರ ಗೊಡವೆಗೇ ಬರಲಿಲ್ಲ.

ಕೃಷ್ಣೆ-ಕಮಲೆ ಆತ್ಮೀಯರಂತೆ ಕಂಡರೂ ಯಾವುದೋ ಸಂಕೋಚದಿಂದ ಏನೂ ಮಾಡಲಾರದಾದರು. ದಿನಕರನೇ ಅವರ ಮಾಧ್ಯಮವಾಗಬೇಕಿತ್ತು. ಆದರೂ ಕೃಷ್ಣೆ ಕಮಲೆಯಿಂದ ಅವನ ಮದುವೆಯಿಂದ ಮೊದಲು

ಗೊಂಡು ಎಲ್ಲ ಸುದ್ದಿ ಕೇಳಿಕೊಂಡಳು. ಕಮಲಿಯ ನಿವೇದನೆಯಲ್ಲಿ ಕೃಷ್ಣೆಯ ಹೆಸರಿಗೆ, ಅವಳ ನೆನಪಿಗೆ ಅವಕಾಶವೇ ಇದ್ದಿಲ್ಲ. ಇದನ್ನು ಕಾಯುತ್ತ ಕುಳಿತ ಕೃಷ್ಣೆ ನಿರಾಶಳಾದರೂ ಕಮಲಿಗೆ ಅದನ್ನು ತೋರಗೊಡದಂತಿದ್ದಳು. ಕಮಲಿ ಹೇಳುತ್ತ ಅವನ ಊಲನ್ ಸೂಟ್, ಸೈಕಲ್‌ಗಳ ಬಗ್ಗೆಯೂ ಹೇಳಿದಳು. ಅವನ ತಿರುಗುವ ಹುಚ್ಚು, ಅತ್ತಿಕೊಳ್ಳಗಳನ್ನೂ ಬಿಡಲಿಲ್ಲ. ಆದರೆ ಅವನ ವಿಮನಸ್ಕತೆಯ ಲಹರಿಯನ್ನವಳು ಹೇಳಬಯಸಲಿಲ್ಲ.

"ನನ್ನ ಬಗ್ಗೆ ದಿನೂ ನಿನಗೆ ಏನೂ ಹೇಳಿಲ್ಲವೇ—ಕಮಲ ?"

"ಇಲ್ಲ."

"ಏನು ಹೇಳಿಯಾನು ! ಆರೆಂಟುವರ್ಷದ ಹಿಂದೆ ಅವನ ಮನೆಯಿಂದ ಬಂದವಳು ನಾನೂ ಅವನಿಗೆ ಏನೂ ತಿಳಿಸಲಿಲ್ಲ. ನಾನಿದ್ದೇನೆಂದೇ ಅವನಿಗೆ ಅನಿಸಿರಲಿಕ್ಕಿಲ್ಲ. ಆದರೆ 'ನಾನಿದ್ದೆ' ಎಂಬುದನ್ನು ಅವನು ಮರೆಯಲಾರ. ಅಂತೂ ಇಂದು ಅವನನ್ನು ನಿನ್ನೊಡನೆ ನೋಡುವದು ನನಗೆ ಬಹಳ ಸಂತೋಷ ತಂಗೀ, ನನ್ನ ಆಯುಷ್ಯ ನಿಮ್ಮಿಬ್ಬರಲ್ಲಿ ಹಂಚುತ್ತೇನೆ.

"ನನ್ನ ತಂದೆ ತಾಯಿ ನನಗೆ ಹುಚ್ಚುಹಿಡಿಸಿದರು. ಪಾರ್ವತೀ ಅಬಚಿ, ದಿನಕರ ಕೂಡಿ ನನ್ನನ್ನು ಇಲ್ಲಿಗೆ ಬರುವಂತೆ ಮಾಡಿದರು. ತಂಗೀ, ಅಂದೊಂದು ಕಥೆ. ದಿನಕರ ಚಿಕ್ಕವನೇ ಇದ್ದ. ನನಗೆ ಅವನು ಮೂರುದಿನಕ್ಕೆ ಚಿಕ್ಕವ ನಂತೆ. ಆದರೆ ಅವನ ಸ್ವಭಾವ ನೋಡುವಾಗ ಹತ್ತು ವರುಷಕ್ಕೆ ಚಿಕ್ಕವನಾಗಿ ಕಾಣುತ್ತಾನೆ. ಅವನು ಹಾಗೆ ಚಿಕ್ಕವನಾಗೇ ಇರಲಿ. ಅವನು ಕೂಸಿನಂಥವ. ನೀನೂ ಹಾಗೇ ಕಾಣುತ್ತೀಯಾ—ಹಾಗೆ ನೋಡಿದರೆ ನೀವು ಒಳ್ಳೆಯ ಜೋಡಿ; ಆದರೆ ನಿಮ್ಮನ್ನು ಯಾರಾದರೂ ನಡೆಸುವವರು ಬೇಕು. ದೇವರೇ ನಡೆಸುತ್ತಾನೇಳು—ಕಮಲ. ನಾನು ನನ್ನ ಗಂಡನಿಗೆ ಇಷ್ಟು ಅನ್ಯೋನ್ಯಳಾಗಿ ದ್ದೇನೆಂಬುದು ನನಗೇ ತಿಳಿದಿದ್ದಿಲ್ಲ. ಆದರೆ ಇಂದವರು ಹೊರಟು ನಿಂತಾಗ ಅವರ ಹೃದಯದಲ್ಲಿ ನನ್ನ ಬಗ್ಗೆ ಏನೋ ಒಂದು ಕರ್ತವ್ಯವಿದೆಯೆಂದು— ಅವರು ದಿನಕರನಿಗೆ ನನ್ನ ಬಗ್ಗೆ ಹೇಳಿದಾಗ ಕಂಡುಕೊಂಡೆ, ನೋಡು ಕಮಲ. ನಿನಗೇಕಮ್ಮ, ನನ್ನ ಈ ಕಥೆ ?" ಎಂದು ಉಸಿರೆಳೆದುಕೊಂಡಳು ಕೃಷ್ಣೆ.

ಕಮಲಿ ಕೃಷ್ಣೆಯಲ್ಲಿ ತನ್ನ ತಾಯನ್ನೇ ಕಂಡಳು.

" ಯಾಕೆ ಹೀಗೆ ಹೇಳುತ್ತೀ—ಅತ್ತಿಗೆ ? ನಿನ್ನ ಕಥೆ ನನಗೆ ಬೇಡವೇನು? ಹೇಳು ಅತ್ತಿಗೆ.... "

" ಕಮಲ, ನೀನು ಬಸುರಿ. ನಿನಗೆ ವಿಶ್ರಾಂತಿ ಅಗತ್ಯ. ಇದೆಲ್ಲ ಮತ್ತೆ ಹೇಳುತ್ತೇನೆ. ನೀನು ವಿರಾಮವಾಗಿ ತೋಟದಲ್ಲಿ ಪ್ರಭೆಯೊಡನೆ ತಿರುಗಾಡು; ರೇಡಿಯೋ ಇದೆ; ಕೇಳು. ಊರಲ್ಲಿ ಸುತ್ತಿಕೊಂಡು ಬರುವಿಯಾದರೆ ಹೇಳು- ಟ್ಯಾಕ್ಸಿ ತರಿಸಿ ಕೊಡುವೆ. ನನ್ನನ್ನೇನು ಮಾಡುತ್ತೀ–ಕಲ್ಲಿನಂತಿದ್ದೇನೆ. ಎಂದೋ ರಾಮನ ಪಾದಸ್ಪರ್ಶವಾಗಬೇಕು. ಆಗ ಅಹಲ್ಯೆ ನನ್ನಲ್ಲಿ ಮೂಡಿ ನಿಂತಾಳು. ಇರಲಿ; ದಿನಕರ ನಿನ್ನನ್ನು ಯಾಕೆ ಬಿಟ್ಟು ಹೋದ—ಎಷ್ಟೊತ್ತು ಹೋದ? ಅವನಿಗೆ ಬುದ್ಧಿಯಿಲ್ಲ. ಒಯ್ದುವರೇ ತಂದು ಬಿಡುವವರೆಗೆ ಅವನಿಗೆ ಬರುವ ವಿಚಾರವೇ ಹೊಳೆಯುವದಿಲ್ಲ.

" ಬಾ ತಂಗೀ, ನಿನಗೆ ಹೂವಿನ ಜಡೆ ಹೆಣೆಯುತ್ತೇನೆ. ಹೂವಿನ ಹಾಗೆ ನಿನ್ನನ್ನು ನೋಡಿಕೊಳ್ಳಬೇಕು—ನೋಡು; ರೈಲು ಪ್ರವಾಸದ ಆಯಾಸ ಇನ್ನೂ ನಿನ್ನ ಮುಖದ ಮೇಲೆ ಬರೆದಿದೆ. ನಾಳೆ ನೀನು ಎಣ್ಣೆ-ನೀರು ಹಾಕಿ ಕೊಳ್ಳಬೇಕು ಕಮಲ. ದಿನಕರ ಕೆಲಸದವ; ಅವನಿಗೆ ರಜಾ ಇಲ್ಲವಾದರೆ ಅವನು ಹೋಗಲಿ, ನೀನು ನಾಲ್ಕು ದಿನ ಇದ್ದು ಹೋಗು ಮಗಳೇ. ಅಲ್ಲಿ ಯಾದರೆ ನಿನ್ನನ್ನಾರು ನೋಡಿಕೊಂಡಾರು ? "

" ಅವರು " ಎಂದು ನಡುವೇ ಬಾಯಿ ಹಾಕಿದಳು ಕಮಲೆ.

" ಸಂತೋಷ, ಕಮಲ. ನೀವು ಅಗಲಿ ಇರಬೇಕೆಂದು ನಾನು ಹೇಳ ಲಿಲ್ಲ. ತವರು ಮನೆಯಲ್ಲೂ ಯಾರಿಲ್ಲವೆಂದಿ— "

" ಅದಲ್ಲ ಅತ್ತಿಗೆ, ನೀನೂ ಅಲ್ಲಿಗೇ ಯಾಕೆ ಬರಬಾರದು—ನಿನ್ನವರು ಬರುವವರೆಗೆ ? "

" ನನ್ನನ್ನು ಕರೆಯುವ ಸ್ವಾತಂತ್ರ್ಯವಿದೆಯೇ—ಕಮಲ ? ನಿನ್ನ ಗಂಡ ಮೂರ್ಖನಮ್ಮಾ. ನಿನಗೆ ಇಷ್ಟು ಸಲಿಗೆ ಕೊಟ್ಟಿರುವನೇ ? " ಎಂದು ಕೃಷ್ಣೆ ನಕ್ಕಳು.

ಕಮಲೆಗೆ ಕೃಷ್ಣೆಯ ಬಗ್ಗೆ ಒಮ್ಮೊಮ್ಮೆ ಒಂದೊಂದು ಬಗೆಯ ಅಭಿ ಪ್ರಾಯ ಬರುತ್ತಿದ್ದವು. ತನ್ನನ್ನು ಅವಳು ಪ್ರೀತಿಸುವ ತಾಯಿಯಂತೆ ಕಂಡರೆ ದಿನಕರನಿಗೆ ಬುದ್ಧಿಯಿಲ್ಲವೆಂದಾಗ ಹೇಗೋ ಅನಿಸುತ್ತದೆ. ಒಮ್ಮೊಮ್ಮೆ ಅವಳು

ಹೇಳಿದ್ದು ಸರಿ—ಎನಿಸುತ್ತದೆ. ತನಗೂ ಆಕೆ ಹಾಗೇ ಅನ್ನುತ್ತ ಇಬ್ಬರಿಗೂ ಬುದ್ಧಿಯಿಲ್ಲವೆನ್ನುತ್ತಾಳೆ. ಅವಳು ಜಾಣಳೋ–ಹುಚ್ಚಿಯೋ ಕಮಲೆಗೆ ತಿಳಿಯಲಿಲ್ಲ. ಅವಳನ್ನು ಆಕೆಯ ಗಂಡ ಸರಿಯಾಗಿ ನೋಡಿಕೊಳ್ಳುವದಿಲ್ಲವೇ ? ಇಂದು ಅವನ ಮನಸ್ಸು ತಿಳಿಯಿತು—ಎನ್ನುತ್ತಾಳೆ. ಯಾಕೆ ಹೀಗೆ? ಏನೋ ತನ್ನಿಂದ ಬಚ್ಚಿಡುತ್ತಾಳೆ. ಇನ್ನೇನಿದೆಯೋ ಇರಲೊಲ್ಲದೇಕೆ. ಇವರನ್ನು ಇಷ್ಟು ಪ್ರೀತಿಸುವವಳ ಬಗ್ಗೆ ಇವರು ತನಗೇಕೆ ಏನೂ ಹೇಳಲಿಲ್ಲ ? ಮರೆತಿದ್ದಾರೆಯೇ ? ಅದು ಹೇಗೆ ಮರೆತ್ತೀತು ? ಇವಳು ಇವರ ಸ್ವಭಾವವನ್ನು ತನಗಿಂತ ಚೆನ್ನಾಗಿ ಅರಿತಂತೆ ಆಡುತ್ತಾಳೆ. ತನಗೆ ಅವರ ಬಗ್ಗೆ ಮಸಕು ಮಸಕಾಗಿ ಅನಿಸಿದ್ದನ್ನು ಅವಳು ಸ್ಪಷ್ಟವಾಗಿ ಹೇಳುತ್ತಾಳೆ. ಹೌದು ! ಅವಳು ಹೇಳುವದು ನಿಜವೇ.

ಗೇಟಿನಲ್ಲೇ ಇದ್ದ ಪ್ರಭೆ ದಿನಕರ ಬಂದುದನ್ನು ನೋಡಿ "ಮಾವಾ ಬಂದರು" ಎಂದು ಕೂಗಿಕೊಂಡು ಒಳಗೆ ಓಡಿ ಬಂದಳು.

ಕೃಷ್ಣಾ-ಕಮಲಾ ಹೊರಗೆ ಬಂದರು.

ದಿನಕರ ಒಳ್ಳೇ ಲಹರಿಯಲ್ಲಿದ್ದ.

"ಪ್ರಭಾ, ಕಾತರಕೀ ಹೋದರಲ್ಲ—ಮುಂಬಯಿಗೆ."

"ಹೋಗಲೊಲ್ಲರೇಕೆ; ಅವರು ನನ್ನ ಕಾತರಕಿಯೇನು ?"

"ಅಲ್ಲವೇನು ಮತ್ತೆ ? ಅವರನ್ನೇ ಜಪಿಸುತ್ತಿರುತ್ತೀ" ಕಮಲೆಯೆಂದಳು.

"ಎಲ್ಲೀ–ಕಮಲಕ್ಕ ?"

"ಮನದಲ್ಲಿ ?"

"ಮತ್ತೆ ಕೊಲ್ಹಾಪುರಕ್ಕೆ ಬರುತ್ತಾನೇಳು" ಸಮಾಧಾನಪಡಿಸುವಂತೆ ದಿನಕರ ಮಾತಾಡಿದ.

"ಬರಲೊಲ್ಲರೇಕೆ—ನನಗೇನು ?" ಎಂದು ನಾಚಿಕೊಂಡಳು. ಗಲ್ಲ ಕೆಂಪೇರಿತು.

"ಅಲ್ಲ; ದಿನಕರ, ಎಷ್ಟು ಹೊತ್ತು ಹೋಗುವದು ?"

ಕೃಷ್ಣೆಯ ಅಧಿಕಾರವಾಣಿ !

ದಿನಕರನ ಉತ್ತರವಿಲ್ಲ.

" ಹೋಗಲೊಲ್ಲೆಯೇಕೆ; ಕಮಲೆಯನ್ನೂ ಕರೆದುಕೊಂಡು ಹೋಗ ಬಾರತಿತ್ತೆ ? ಅವಳು ನಿನ್ನನ್ನೇ ಎದುರು ನೋಡುತ್ತ ಕುಳಿತಿದ್ದಳು. ಅಲ್ಲ ವೇನೇ ? "

" ಯಾಕೆ ಅತ್ತಿಗೆ ? ನೀನಿರುವಿಯಲ್ಲ. ನನಗೇಕೆ ಬೇಸರ ? "

ಅವರ ಅನ್ಯೋನ್ಯತೆಯನ್ನು ದಿನಕರ ಸ್ವಾಗತಿಸಿದನಾದರೂ ಅದರ ಸತ್ಯಾ ಸತ್ಯತೆಯನ್ನು ಅರಿಯದವನಂತೆ—

" ನಿನಗೆ ಕೃಷ್ಣೆಯೆಂದರೆ ಅಷ್ಟು ಪ್ರೀತಿಯೆ ? "

ಎದುರೇ ಹೀಗೆ ಕೇಳಬಹುದೇ—ಎಂದುಕೊಂಡಳು ಕೃಷ್ಣಾ.

" ಏಕಲ್ಲ ? " ಕಮಲೆಯೆಂದಳು.

" ಅವಳನ್ನು ನೀನಿಂದೇ ನೋಡಿದ್ದು."

" ಆದರೇನು ? ನೀವು ಈಗ ಅವರನ್ನು ಮರೆತಂತೆ ನಾನಿನ್ನು ಮರೆತೇ ನೇನು ? "

" ನೀನಿನ್ನು ಮರೆಯಲಾರಿ. "

" ಗಂಡಸು ಮರೆತು ಇರಬಲ್ಲ—ಅಲ್ಲವೇ ದಿನಕರ ? "

ತನ್ನನ್ನೇ ಕುರಿತು ಆಡಿದ ಈ ಮಾತನ್ನು ದಿನಕರ ದಕ್ಕಿಸಿಕೊಳ್ಳಲಾರದೆ " ನಾನು ಮರೆತಿರುವೆನೆಂದು ಯಾರು ಹೇಳಿದರು ? "

" ಯಾರು ಯಾಕೆ ಹೇಳಬೇಕು ? ನೀನು ನನ್ನನ್ನು ಗುರುತಿಸಿದೆಯಾ ಇಂದು ? " ಈವರೆಗೆ ಕೃಷ್ಣೆಯೊಡನೆ ನೇರವಾಗಿ ಮಾತಾಡಲಾರದ ದಿನಕರ—

" ನೀನು ಕಳೆದ ಭಾನುವಾರ ನಸುಕಿನಲ್ಲಿ ಪುಣೆಯ ನಿಲ್ದಾಣದಲ್ಲಿದ್ದೆಯಾ ಕೃಷ್ಣಾ ?"

" ಕಳೆದ ರವಿವಾರ ! ಹೌದು; ಬೆಂಗಳೂರಿನಿಂದ ಬರುವ ಇವರನ್ನು ಕರೆಯ ಹೋಗಿದ್ದೆ."

" ಅದೇ ಗಾಡಿಯಿಂದ ನಾವಿಳಿದುದನ್ನು ನೋಡಿದೆಯಾ ?"

" ಇಲ್ಲ; ನೋಡಿದ್ದರೆ........ನೀನು ನನ್ನನ್ನು ನೋಡಿದೆಯಾ ? "

" ಇಲ್ಲವಾದರೆ ಹೇಳುತ್ತಿದ್ದೆನೆ ?"

" ನೋಡಿದರೆ ಮತ್ತೆಯಾಕೆ....?"

" ಅದನ್ನು ಕೇಳಬೇಡ ಕೃಷ್ಣಾ—" ಎಂದು ದಿನಕರ ತಲೆಯ ಮೇಲೆ ಕೈ ಹೊತ್ತು ಕುಳಿತ.

ಪ್ರಭೆ--ಕಮಲೆಯರು ಇಬ್ಬರನ್ನೂ ನೋಡುತ್ತಿದ್ದರು. ಕೃಷ್ಣೆಯೂ ಎದುರಾಡದೆ ಕುಳಿತಳು.

ಒಳಗಿನಿಂದ ಅಡಿಗೆ ಸಿದ್ಧವಾದ ಸೂಚನೆ ಬಂತು. "ಏಳಿರಿ, ಊಟ ಮಾಡೋಣ" ಎಂದು ಕೃಷ್ಣೆ ಒಳಗೆ ಹೋದಳು. ಪ್ರಭೆಯೂ ಹಿಂಬಾಲಿಸಿದಳು.

ಕಮಲೆ ದಿನಕರನ ಬಳಿಗೆ ಬಂದು—

"ಯಾಕೆ, ಸೌಖ್ಯವಿಲ್ಲವೇ? ಕೋಟು ಕಳೆಯುತ್ತೀರಾ ?" ಎಂದು ಅವನನ್ನು ಹಿಡಿದು ಕೇಳಿದಳು. ದಿನಕರ ಎದ್ದುನಿಂತ. ಕಮಲೆಯೇ ಅವನ ಕೋಟು ಕಳಚಿ ಇಟ್ಟು ಒಳಗೆ ಹೋದಳು.

ದಿನಕರನೂ ಒಳಗೆ ಹೆಜ್ಜೆ ಹಾಕಿದ.

## ೨೫

ಎಂಟುದಿನಗಳಿಂದ ದೊರೆಯದ ಏಕಾಂತ ಕಮಲೆಗಿಂದು ದೊರೆತಂತಿತ್ತು. ಅದನ್ನು ಸಂಭ್ರಮದಿಂದ ಎದುರುಗೊಂಡಳು. ಕೃಷ್ಣೆ ಸಂಜೆ ಆ ರೂಮನ್ನು ತೋರಿಸಿ 'ಇದು ನಿಮಗೆ' ಎಂದಾಗಿನಿಂದ ಅವಳು ಏನೇನೋ ಪ್ರಶ್ನೆಗಳನ್ನು ಸೃಷ್ಟಿಸಿಕೊಂಡು ದಿನಕರನನ್ನು ಕೇಳಬೇಕೆಂದು ಯೋಚನೆ ಮಾಡಿಕೊಂಡಳು. ಬಳಲಿದಂತಿದ್ದ ಅವನನ್ನು ತನ್ನ ತೋಳಸೆರೆಯಲ್ಲಿ ರಕ್ಷಿಸಬೇಕೆಂದು ಹಾತೊರೆದಳು. ಸಂಜೆ ಅವನನ್ನು ನೋಡುವಾಗ, ಅವನು ಹೊರಗಿನಿಂದ ನಗೆಮಾತಿನಿಂದಲೇ ಬಂದು ನಿಂತಾಗ ಅವಳ ಕನಸಿಗೆ ಕೋಡು ಮೂಡಿದಂತಾಗಿ ಎದೆಯಾರೆ ಸ್ವಾಗತಿಸಿದ್ದಳು. ಅವಳಿಗೆ ಊಟ–ಮಾತು ಯಾವುದೂ ಬೇಡವಾಗಿತ್ತು. ಆದರೆ ಲೋಕಾಚಾರವನ್ನು ಹೆಣ್ಣು ಪಾಲಿಸಲೇ ಬೇಕಷ್ಟೆ. ಅವನು ಬಂದ ಮೇಲೆ ಆದ ಮಾತು–ಕತೆಯಿಂದ ಅವಳ ಬಿಚ್ಚುಮನಸ್ಸಿಗೂ ಬಿಸಿ ತಗಲಿದಂತಿತ್ತು. ಆದರೂ ಪತಿಯನ್ನು ಕೊಂಡು ಕೊನೆದಾಡಬೇಕೆಂಬ ಬಯಕೆ ಉತ್ಕಟವಾಗಿತ್ತು.

ಊಟಕ್ಕೆ ಕೂತಾಗ ದಿನಕರನಿಗೆ ಏನೂ ಸೇರಲಿಲ್ಲ.

"ಯಾಕೆ ಮಾಮಾ, ಹೊರಗೆ ಆಮ್ಲೇಟು, ಕಟ್ಲೇಟು ಆಗಿದೆಯೇನೋ!" ಎಂದು ಪ್ರಭೆ ಕೆಣಕಿದಳು.

ಇದ್ದಂತೆಯೇ ನಗೆ ತರಲೆತ್ನಿಸಿದ ದಿನಕರ

" ಹೂ; ಕಾತರಕಿ ಬಿಡಬೇಕಲ್ಲ—" ಎಂದಿದ್ದ.

" ಇರಲಿ ಬಿಡಿರಿ, ನೀವೊಂದು ! ನಿಮಗದೇ ಧ್ಯಾನ."

" ಅದು ನಿನ್ನ ಧ್ಯಾನ, ಪ್ರಭಾ."

" ಕಮಲಕ್ಕ, ನೀವೇನು ಧೇನಿಸುತ್ತೀರಿ ?"

" ಇನ್ನೇನು ಧೇನಿಸಲಿ ಪ್ರಭಾ, ನಿನ್ನ ಮದುವೆ! "

" ನೀವೂ ಅವರೇ. ಇಷ್ಟು ಹೊತ್ತು ಮಾಮಾ ಬರಲಿಲ್ಲವೆಂದು ಅಳುತ್ತ ಕೂತಿದ್ದಿರಲ್ಲ. "

" ಹೌದು ಪ್ರಭಾ, ಅವಳು ಅಳುತ್ತಿದ್ದುದು ದಿನಕರನಿಗೇ ಇರಬೇಕು." ಎನ್ನುತ್ತ ಕೃಷ್ಣೆ— " ದಿನಕರ, ನಿನಗೇನಾಗಿದೆ ? ಸೇರದಿದ್ದರೆ ಉಣ್ಣಬೇಡ. "

" ಈ ಖಾಲಿ ಸ್ಥಳದಲ್ಲಿ ಏನು ತುಂಬಲಿ?" ಎಂದು ದಿನಕರ ತನ್ನ ಹೊಟ್ಟೆ ತೋರಿಸಿದ.

ಕೃಷ್ಣೆ ಕಮಲೆಯನ್ನು ತೋರಿಸುತ್ತ—" ಇಲ್ಲಿದೆ ನೋಡು ನಿನ್ನ ಬೇಟೆ!" ಎಂಬಂತೆ ನೋಡಿ ನಡುವೇ ಎದ್ದು ಒಳಗೆ ಹೋದಳು.

ದಿನಕರ ಕಮಲೆಯನ್ನು ನೋಡಿದ. ಅವಳು ಯಾವ ಕಲಂಕವೂ ಇಲ್ಲದ ನಕ್ಷತ್ರದಂತೆ ಕೂತಿದ್ದಾಳೆ.

" ನಾನು ಎದ್ದುಬಿಡಲೇ ? " ಎಂದು ಪ್ರಭೆಯನ್ನು ಕೇಳಿದ.

" ನೀವು ಹೋಗಿ ಮಲಗಿಬಿಡಿರಿ ಮಾಮಾ. "

ಕಮಲೆ ಅಲ್ಲಿಯೇ ಅವನಿಗೆ ನೀರು ಹನಿಸಿ ಕೈ ಒರಿಸಲು ಟವಲು ಕೊಟ್ಟಳು. ದಿನಕರ ಏಳುತ್ತ " ನಾನು ಮಲಗಿ ಬಿಡುತ್ತೇನೆ " ಎಂದ.

ಕಮಲೆಯೂ ಕೈತೊಳೆದು ಎದ್ದು ಅವನಿಗೆ ದಾರಿ ತೋರುವಂತೆ ಮುನ್ನಡೆದಳು.

ಉಪಚಾರವೂ ಮೀರಿದ ಮಾತಾಗಿತ್ತು ಕಮಲೆಗೆ. ಒಳಗೆ ದಿನಕರನನ್ನು ಕರೆದು ಬಾಗಿಲು ಹಾಕಬೇಕೆಂದಾಗ ಕೃಷ್ಣೆ ಬಂದು,

“ ಕಮಲ, ಇದಿಷ್ಟು ಓವಲ್ಟಿನ್ ಕುಡಿದು ಮಲಗಹೇಳು ಅವನಿಗೆ ” ಎಂದಳು.

ಕಮಲೆ ಓವಲ್ಟಿನ್ ಕೃಷ್ಣೆಯ ಕೈಯಿಂದ ಇಸಿದುಕೊಂಡು ಸಂಕೋಚ ದಿಂದ,

“ ನನ್ನ ಊಟವೂ ಆಯಿತು, ಅತ್ತಿಗೆ ” ಎಂದಳು.

“ ನಿನ್ನ ಹೊಟ್ಟೆ ಹೀಗೇ ತುಂಬಿರಲಮ್ಮಾ ” ಎನ್ನುತ್ತ ಕೃಷ್ಣೆಯೇ ಬಾಗಿಲ ತೆರೆ ಇಳಿಬಿಟ್ಟಳು. ಸಪ್ಪಳಾಗದಂತೆ ಕಮಲೆ ಬಾಗಿಲು ಮುಚ್ಚಿ ಕೊಂಡಳು.

ದಿನಕರ ಹಾಸಿಗೆಯ ಮೇಲೆ ಬೋರಲಾಗಿ ಬಿದ್ದುಕೊಂಡಿದ್ದ. ಟೇಬಲ್ ಮೇಲೆ ಓವಲ್ಟಿನ್ ಇಟ್ಟು ಕಮಲೆ ಮಂಚವನ್ನೇರಿ ಪತಿಯನ್ನು ತಿರುಗಿಸಿ ಕೊಂಡಳು. ಕಣ್ಣು ಮುಚ್ಚಿಕೊಂಡೇ ದಿನಕರ ಕಮಲೆಗೆ ಸಮ್ಮುಖನಾದ.

ಅವನ ತಲೆಯ ಮೇಲೆ, ಹಣೆಯ ಮೇಲೆ ಕೈಯಾಡಿಸುತ್ತ ಕಮಲೆ—

“ ಯಾಕೆ ಹೀಗಿದ್ದೀರಿ ? ” ಎಂದಳು.

“ ಬಾ, ನನ್ನ ರಾಣಿ ! ನನಗೆ ಏನೂ ಬೇಡ. ಇದೊಂದು ಸಾಕು ” ಎಂದು ಅವಳನ್ನು ಬಾಚಿಕೊಂಡ. ಕಮಲೆಗೂ ಅಷ್ಟೆ ಸಾಕಾಗಿತ್ತು. ತನ್ನ ಎರಡೂ ಕೈಗಳಿಂದ ಅವನ ಮುಖ ಹಿಡಿದುಕೊಂಡು, “ ನನ್ನ ರಾಜ ” ಎಂದಳು. ಕಣ್ತೆರದು ನೋಡಿ ದಿನಕರ “ ನನ್ನ ಕಮಲ ” ಎಂದ. ಕಮಲೆ ಮಾತನ್ನಾಡದೆ, ಅವನನ್ನೂ ಆಡಗೊಡದೆ, ಅವನನ್ನೂ ಅವನ ಚಿಂತೆಯನ್ನೂ ತಿಂದೇಬಿಟ್ಟಳು. ಅವಳು ಕೇಳಬೇಕೆಂದ ಪ್ರಶ್ನೆಗಳು ಎಲ್ಲಿ ಹೋದವೋ ! ದಿನಕರನ ಚಿಂತೆ ಎಲ್ಲಿ ಹೋಯಿತೋ !

* * * *

ಕಮಲೆ ಕಣ್ತೆರೆದಾಗ ಬೆಳಕಾಗಿತ್ತು. ಗಡಿಯಾರ ನೋಡುವಾಗ ಎಂಟಾ ಗಿತ್ತು. ದಿನಕರನಿನ್ನೂ ನಿದ್ರೆಮಾಡಿದ್ದ. ಅವನ ಹಣೆಯ ಮೇಲಿನ ಕೂದಲು ಸರಿಸಿದ ಕಮಲೆಗೆ ಅದು ಸುಡುತ್ತಿದ್ದಂತೆನಿಸಿತು. ಗಾಬರಿಯಾದವಳಂತೆ “ನನ್ನ ರಾಜ ” ಎಂದಳು. ಅವನಿಗೆ ಎಚ್ಚರವೇ ಇಲ್ಲ. ಹೊರಳಾಡಿಸಿ ಅವನನ್ನು ಎಬ್ಬಿಸಲೇ ಎಂದು ಮೈದಡವಿದಳು. ಅದೂ ಸುಡುತ್ತಿತ್ತು. ಚಟಕ್ಕನೆ ಎದ್ದು ಹೊರಕ್ಕೆ ಬಂದು “ ಅತ್ತಿಗೆ, ಅತ್ತಿಗೇ ” ಎಂದು ಕೂಗಿದಳು.

ಪ್ರಭಾ ಕೃಷ್ಣಾ ಮಾತಾಡುತ್ತ ಕುಳಿತಿದ್ದರು. ಹುಚ್ಚಿಯಂತೆ ತಲೆ ಕೆದರಿ ಕೊಂಡು ಗಾಬರಿಗಣ್ಣಿನಿಂದ ನೋಡುತ್ತ ಬಂದ ಕಮಲೆಯನ್ನು ನೋಡಿ ಕೃಷ್ಣಾ ಎದ್ದು ಬಂದು ಅವಳನ್ನು ತಬ್ಬಿಕೊಂಡು "ಏನು ಕಮಲ" ಎಂದಳು.

"ಇವರ ಮೈ ಬಿಸಿಯಾಗಿದೆ" ಎಂದಳು.

"ಇಷ್ಟೇಯೇ ? ಎದ್ದಿದ್ದಾನೆಯೋ ? "

"ಇಲ್ಲ."

"ಎಬ್ಬಿಸು."

"ಕರೆದೆ; ಮಾತಾಡಲಿಲ್ಲ ಅತ್ತಿಗೆ; ಅವರಿಗೆ ಹೀಗೆಂದೂ ಆಗಿದ್ದಿಲ್ಲ."

"ನಿನಗೇನಾಗಿದೆ ಕಮಲ? ಇನ್ನಷ್ಟು ನಿದ್ದೆಮಾಡಿ ಏಳಲಿ ಬಿಡು."

"ಇಲ್ಲ ಅತ್ತಿಗೆ, ಹಣೆಕೂಡ ಸುಡುತ್ತಿದೆ."

ಕೃಷ್ಣೆಗೆ ಬೇರೆ ಉಪಾಯವೇ ಉಳಿಯಲಿಲ್ಲ. ಅವಳೂ ರೂಮಿಗೆ ನಡೆದಳು. ತೆರೆ ಸರಿಸಿ ಒಳಗೆ ನೋಡಿದಳು. ದಿನಕರ ಇನ್ನೂ ಕಣ್ಣುತೆರೆದಿಲ್ಲ. ಒಳಗೆ ಬಂದು ಕೃಷ್ಣೆ ರೂಮನ್ನೊಮ್ಮೆ ಕಣ್ಣಾಡಿಸಿ ನೋಡಿದಳು. ಕಪ್ಪು ತುಂಬಿಟ್ಟ ಓವಲ್ಟಿನ್ ಅಲ್ಲೇ ಟೇಬಲ್ ಮೇಲೆ ಹಾಗೇ ತಣ್ಣಗಾಗಿದೆ.

"ಓವಲ್‌ಟಿನ್ ಕೊಡಲಿಲ್ಲವೇ—ಕಮಲ."

"ಇಲ್ಲ, ಮರೆತೇ ಹೋಯಿತು" ಎಂದು ಅಪರಾಧಿನಿಯಂತೆ ಗಾಬರಿಗೊಂಡು ನುಡಿದಳು.

"ಎಬ್ಬಿಸು ಕಮಲ"

"ನೀವೇ" ಎಂಬಂತೆ ಕಮಲೆ ಕೃಷ್ಣೆಯನ್ನು ನೋಡಿದಳು.

"ದಿನಕರ, ದಿನೂ.... "

ಅವನಿಗೆ ಎಚ್ಚರವೇ ಇಲ್ಲ.

ಕೃಷ್ಣೆಯೂ ಗಾಬರಿಯಾಗಿ ಮಂಚವನ್ನೇರಿ ಅವನ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಹಣೆ ಮುಟ್ಟಿ ನೋಡಿದಳು; ಕೈ-ಮೈ ಮುಟ್ಟಿ ನೋಡಿದಳು; ಬಿಸಿಯಾಗಿತ್ತು.

ಮೆಲ್ಲನೆ ಹಣೆಯ ಮೇಲೆ ಕೈಯಾಡಿಸುತ್ತ, "ದಿನಕರ" ಎಂದಳು. "ಕಮಲ" ಎನ್ನುತ್ತ ದಿನಕರ ಕಣ್ಣು ತೆರೆದ. ತಾನು ಕೃಷ್ಣೆಯ ತೊಡೆಯ

ಮೇಲಿದ್ದುದನ್ನೂ ಕಮಲೆ ಗಾಬರಿಯಾಗಿ ಕೆಳಗೆ ನಿಂತುದನ್ನೂ ನೋಡಿ—
"ಕೃಷ್ಣಾ— " ಎಂದ.

"ನಿನಗೆ ಜ್ವರ ಬಂದಿದೆ ದಿನೂ. ಈಗ ಡಾಕ್ಟರು ಬರುತ್ತಾರೆ. ಮುಖ ತೊಳೆಯುತ್ತೀಯಾ ? "

ಕಮಲೆ ಮಂಚದ ಮೇಲೆ ಬಾಗಿ ದಿನಕರನ ಕಾಲಮೇಲೆ ಬಿದ್ದು ಅವನ ಕೈ ಕುಲಕುತ್ತ—"ಏಳಿ; ಯಾಕೆ ಹೀಗೆ " ಎಂದು ಅಳತೊಡಗಿದಳು.

"ಹುಚ್ಚೀ, ನೀನು ಮೊದಲು ಏಳು " ಎಂದು ಕೃಷ್ಣೆ ಅವಳನ್ನು ಎಬ್ಬಿಸಿ ತನ್ನೆಡೆಗೆ ಸೆಳೆದುಕೊಂಡು

"ಎಷ್ಟು ಗಾಬರಿ-ಕಮಲ ನಿನಗೆ ! "

"ಅತ್ತಿಗೆ "

"ನನ್ನ ಕಮಲ "

ಕಮಲೆ ಕೃಷ್ಣೆಯನ್ನು ತಬ್ಬಿಕೊಂಡು ಅಳತೊಡಗಿದಳು.

"ಇವರಿಗೇನಾಗಿದೆ ಅತ್ತಿಗೆ ?"

ಕೃಷ್ಣೆಗೂ ಉದ್ವೇಗ ತಡೆದುಕೊಳ್ಳುವದಾಗದೆ ಕಮಲೆಯನ್ನು ಬಿಗಿದಪ್ಪಿದಳು. ಅವಳೂ ಅಳುತ್ತಿದ್ದಳು.

ದಿನಕರ ಕಣ್ಣು ತೆರೆದುಕೊಂಡೇ ಮಲಗಿದ್ದ. ಇವರನ್ನು ನೋಡುವಾಗ ಅವನ ಕಣ್ಣಲ್ಲಿಯೂ ನೀರು ಚಿಮ್ಮಿತು.

## ೨೬

ದಿನಕರನ ಕಾಯಿಲೆಯ ಸುದ್ದಿ ತಿಳಿದು ಸೀತಾರಾಮರಾಯರು ಧಾರವಾಡದಿಂದ ಓಡಿಬಂದರು. ಅವನಿಗೆ ಬಂದ ಜ್ವರ ಇಳಿದೇ ಇಲ್ಲ. ಡಾಕ್ಟರರು ದಿನಾ ಬಂದು ನೋಡಿ ಹೋಗುತ್ತಿದ್ದರು. ಏನು ಜ್ವರ, ಯಾಕೆ ಬಂದಿರಬೇಕೆಂದು ಅವರು ಹೇಳಲೇ ಇಲ್ಲ. ಎಚ್ಚರವಿಲ್ಲದೆ ದಿನಕರ ಬಡಬಡಿಸುತ್ತಿದ್ದ: ತನ್ನ ತಾಯನ್ನು ಕರೆದು "ತಪ್ಪಾಯಿತು" ಎನ್ನುತ್ತಿದ್ದ; "ಕೃಷ್ಣಾ, ನೀನೇಕೆ ಬಂದೆ " ಎನ್ನುತ್ತಿದ್ದ. " ಈ ಸಲದ ಪರೀಕ್ಷೆ ಏನಾಗುವದೋ "— ಎಂದು ಅಳುತ್ತಿದ್ದ.

ಸೀತಾರಾಮರಾಯರು ಅವನ ಬದಿಯಲ್ಲಿಯೇ ಕುಳಿತರು. ಪ್ರಭೆ ಬಂದು " ಮಾವಾ ಯಾಕೆ ಹೀಗೆ ಮಾಡುತ್ತಾರೆ ?" ಎಂದು ಕೇಳುವಳು. ಕಮಲೆಗೆ ಅಳುವವದೇ ಕೆಲಸ. ಕೃಷ್ಣೆ ಮಾತ್ರ ಗಂಭೀರಳಾಗಿ ಅವನ ಶುಶ್ರೂಷೆಗೆ ತನ್ನ ಸರ್ವಸ್ವವನ್ನೂ ಒಪ್ಪಿಸಿವಂತೆ ದುಡಿಯುತ್ತಿದ್ದಳು. ಮನೆಯಲ್ಲಿಯ ಕೆಲಸದವರು ಅತಿಥಿಗಳಿಗೆ ಏನೂ ಕಡಿಮೆಯಾಗದಂತೆ ನೋಡಿಕೊಂಡರು.

ಕೃಷ್ಣೆಯು ಕರೆಗೆ ಮಿಲಿಟರೀ ಡಾಕ್ಟರರೂ ಒಮ್ಮೆ ಬಂದು ಹೋದರು. ಅವರು ನೋಡಿ ಕೃಷ್ಣೆಯನ್ನು ಹೊರಗೆ ಕರೆದು 'ಮೆಂಟಲ್ ಶಾಕ್' ಎಂದು ಹೇಳಿದರು. ಅದಕ್ಕೆ 'ಮಾನಸೋಪಚಾರವೇ ಮುಖ್ಯ' ಎಂದು ಸಲಹೆ ಕೊಟ್ಟರು.

ಕೃಷ್ಣೆ—" ಹೌದು; ನನಗೂ ಹಾಗೇ ಅನಿಸಿತ್ತು" ಎಂದು ಹೇಳಿ ಡಾಕ್ಟರರನ್ನು ಕೃತಜ್ಞತೆಯಿಂದ ವಂದಿಸಿ ಕಳಿಸಿದಳು.

ಅವಳು ದಿನಕರನ ಪರಿವಾರಕ್ಕೆ ಈ ವಿಷಯ ತಿಳಿಸಲೇ ಇಲ್ಲ. ಅದಕ್ಕೆ ತಾನೇ ತಕ್ಕ ವೈದ್ಯಳೆಂದುಕೊಂಡಳಾದರೂ ಅವಳಿಗೂ ಎದೆಗುದಿ. ಅಂದು ನನ್ನ ಹುಚ್ಚಾದರೆ ಇಂದು ಇವನ ಬಾರಿ ಬಂತೇ ? ಎಂದು ಕೊರಗಿದಳು. ಸೀತಾರಾಮರಾಯ-ಪ್ರಭೆಯರನ್ನೂ ಅವನ ಎಡೆಯಿಂದ ತಪ್ಪಿಸಿ ಕೇವಲ ಕಮಲೆಯೊಬ್ಬಳೇ ನೋಡಿಕೊಳ್ಳಲಿ—ಎಂದು ಅವಳ ಯೋಚನೆ. ಆದರೆ ಅದು ಅಧೈರ್ಯದ ಜೀವ. " ನಾನೊಲ್ಲೆ— ಅತ್ತಿಗೆ. ನೀನೇ ಇರು" ಎನ್ನುತ್ತಾಳೆ. ಎಲ್ಲರನ್ನೂ ಹೊರಕ್ಕೆ ಹಾಕಿ ತಾನೊಬ್ಬಳೇ ಅವನನ್ನು ನೋಡಿಕೊಳ್ಳಬೇಕೆಂದು ಒಮ್ಮೆ ನೆನಸಿದಳು. ಆದರೆ ಅದು ಮತ್ತೆ ಸರಿಕಾಣಲಿಲ್ಲ.

ಕಮಲೆಗೆ ಏನೂ ಸಂದರ್ಭ ತಿಳಿಯದು. ಅವಳಿಗೆ ಗಾಬರಿ. ತಾನೇ ಪತಿಯನ್ನು ನೋಡಿಕೊಳ್ಳಲಾರಳು. ಕೃಷ್ಣೆ ಊಟ-ನಿದ್ರೆಯಿಲ್ಲದೆ ಕುಳಿತ ಇವಳಿಗೆ ಏನು ಸಮಾಧಾನ ಹೇಳಿದರೂ ವ್ಯರ್ಥವಾಯಿತು. " ನೀನು ಸುಮ್ಮನೆ ನಿನ್ನಷ್ಟಕ್ಕೆ ಇರಮ್ಮಾ, ನಾನೆಲ್ಲ ನೋಡಿಕೊಳ್ಳುತ್ತೇನೆಂ"ದರೆ " ಇವರಿಗೇನಾಗಿದೆ ಅತ್ತಿಗೆ ? ಯಾಕೆ ಹೀಗಾಯಿತು ಅತ್ತಿಗೆ ? ನಾನವರಿಗೆ ಏನೂ ತೊಂದರೆ ಕೊಟ್ಟಿಲ್ಲ—" ಎಂದು ಬಡಬಡಿಸುತ್ತಾಳೆ. ಕೃಷ್ಣೆಗೆ ಇವಳದೂ ಒಂದು ಸಮಸ್ಯೆಯಾಯಿತು.

ಒಂದು ಮಧ್ಯರಾತ್ರಿ ಎಚ್ಚರಗೊಂಡ ದಿನಕರ ಬದಿಯಲ್ಲಿ ಕುಳಿತ ಕಮಲೆಯನ್ನು ನೋಡಿ,

" ನೀನಾರು ತಂಗಿ ? ಇಲ್ಲೇಕೆ ಬಂದೆ ? " ಎಂದು ಕೇಳಿದ.

ಕಮಲೆಗೆ ದಿಗ್ಭ್ರಮೆಯಾಯಿತು. " ಅತ್ತಿಗೆ, ಅತ್ತಿಗೆ " ಎಂದು ಕೂಗಿಕೊಂಡಳು.

ಎಚ್ಚರವಾಗೇ ಇದ್ದ ಕೃಷ್ಣೆ ಒಳಗೆ ಬಂದು,

" ಕರೆದೆಯಾ ಕಮಲ, ದಿನೂ ಮಲಗಿದ್ದಾನೆಯೇ ? " ಎಂದಳು.

" ಅತ್ತಿಗೆ ಹೀಗೇಕೆ ಮಾಡುತ್ತಾರೆ ? "

" ಏನಾಯಿತು ಕಮಲ ? "

" ನೀನಾರು ಎನ್ನುತ್ತಾರೆ; ತಂಗೀ ಏನ್ನುತ್ತಾರೆ; ಇಲ್ಲಿಗೇಕೆ ಬಂದೆ ಎನ್ನುತ್ತಾರೆ. "

" ಎಚ್ಚರವಿಲ್ಲದೆ ಆಡಿರಬೇಕು. ಅದಕ್ಕೇಕಮ್ಮಾ ಗಾಬರಿ ? " ಎಂದ ಕೃಷ್ಣೆ ತಾನೂ ಹೆದರಿಕೊಂಡುದನ್ನು ಮರೆಮಾಚಿ " ದಿನೂ " ಎಂದು ಕರೆದಳು. ದಿನಕರ ಕಣ್ಣು ತೆರೆಯಲಿಲ್ಲ.

" ಆಗ ಕಣ್ಣು ಬಿಟ್ಟು ನನ್ನನ್ನು ನೋಡಿಯೇ ಹಾಗೆಂದರು ಅತ್ತಿಗೆ " ಎಂದು ಕಮಲೆ ಅಳತೊಡಗಿದಳು.

ಕೃಷ್ಣೆ ಮುಂದೆ ಬಂದು ಅವನ ಮೈ ಹಿಡಿದು ಹಣೆ ಮುಟ್ಟಿ ನೋಡಿ, ಥರ್ಮಾಮೀಟರ್ ಇಟ್ಟು ನೋಡಿದಳು. ಜ್ವರ ಏರಿತ್ತು. ಹಣೆಗೆ ತಣ್ಣೀರಿನ ಪಟ್ಟಿ ಇಡುತ್ತ ಕೃಷ್ಣೆ,

" ಜ್ವರ ಏರಿದೆ; ಹಾಗಂದಿದ್ದಾನೆ. ನೀನೇಕೆ ಹೆದರುವಿ ಕಮಲ ? ನನ್ನ ಆಯುಷ್ಯ ಪಣವಾಗಿಟ್ಟಿದ್ದೇನೆ. ಸುಮ್ಮನಿರಮ್ಮಾ ನೀನು. ನನ್ನ ಕೈಕಾಲೂ ಕಳೆಯಬೇಡ. "

" ಅತ್ತಿಗೆ, ನೀವಿಲ್ಲೇ ಇರಬೇಕು. ನನಗೊಬ್ಬಳಿಗೇ ಸಾಧ್ಯವಿಲ್ಲ "

" ಏನು ಸಾಧ್ಯವಿಲ್ಲ ಕಮಲ, ಆಯಿತು; ನಾನಿಲ್ಲೇ ಇರುತ್ತೇನೆ. ನೀನು ಮಲಗಿಕೋ-ನಿದ್ರೆ ಮಾಡು " ಎಂದಳು—ಕೃಷ್ಣಾ.

" ನನ್ನನ್ನು ಮಲಗಿಸು ಅತ್ತಿಗೆ; ಹೆದರಿಕೆಯಾಗುತ್ತಿದೆ. " ಎಂದು ಕಮಲೆ ಕೃಷ್ಣೆಗೆ ತೆಕ್ಕೆ ಬಿದ್ದು ಅಳತೊಡಗಿದಳು.

ದಿನಕರ ಒಮ್ಮೆ ಕಣ್ಣು ಬಿಟ್ಟು ನೋಡಿದ; ಮತ್ತೆ ಕಣ್ಣು ಮುಚ್ಚಿದ.

ಕೃಷ್ಣೆ ಕಮಲೆಯನ್ನು ಹಾಸಿಗೆಗೆ ಕರೆದೊಯ್ದು ತನ್ನ ತೊಡೆಯ ಮೇಲೆ ಅವಳ ತಲೆ ಇರಿಸಿಕೊಂಡು ಹಣೆಯ ಮೇಲೂ ತಲೆಯ ಮೇಲೂ ಕೈಯಾಡಿ ಸುತ್ತ "ಮಲಗು ಕಮಲ, ನಾನಿದ್ದೇನೆ" ಎಂದಳು.

"ನೀನಿಲ್ಲೇ ಇರು ಅತ್ತಿಗೆ; ನಾನು ಹೀಗೇ ಮಲಗುವವಳು" ಎಂದು ಕಣ್ಣತುಂಬ ನೀರು ತಂದು ನುಡಿದ ಕಮಲೆಯ ತುಟಿ ಉದ್ವೇಗದಿಂದ ನಡುಗುತ್ತಿತ್ತು.

ಕೃಷ್ಣೆ ಬಾಗಿ ಅವಳನ್ನು ಚುಂಬಿಸಿ

"ಇನ್ನು ಹೆದರಬೇಡ ತಂಗೀ, ನಿನ್ನ ಚಿಂತೆಯೆಲ್ಲ ನನಗಿರಲಿ. ಹೂಂ. ಕಣ್ಣು ಮುಚ್ಚು–ನಿದ್ರೆ ಮಾಡು."

ಕಮಲೆ ಮಲಗಬೇಕಲ್ಲ! ಎದ್ದು ಕುಳಿತು ಕೃಷ್ಣೆಯನ್ನಪ್ಪಿಕೊಂಡು ಅವಳ ಮುಖಕ್ಕೆ ತನ್ನ ಗಲ್ಲ ಹಚ್ಚಿಕೊಂಡು

"ಅತ್ತಿಗೆ, ನನಗೆ ಇವರನ್ನು ಉಳಿಸಿಕೊಡುವಿಯಾ ?"

ಕೃಷ್ಣೆಗೂ ಅಳು ತಡೆಯದೆ ಕಮಲೆಯ ತಲೆಯನ್ನು ಎದೆಗೆ ಒತ್ತಿ ಕೊಂಡು,

"ನಿನ್ನ ವಸ್ತು ನಿನಗೇ ಇದೆ; ನಾನೇನು ಮಾಡಲಿ ಇನ್ನು ?" ಎಂದು ಕಮಲೆಯ ತಲೆಯಲ್ಲಿ ಮುಖವಿಟ್ಟು ಕಂಬನಿಗರೆದಳು.

* * * *

ಸೀತಾರಾಮರಾಯರೂ ಸುಮ್ಮನೇ ಕೂತಿಲ್ಲ. ಪುಣೆಯಲ್ಲಿಯ ತಮ್ಮ ಪರಿಚಿತ ಭವಿಷ್ಯವಾದಿಯನ್ನು ಕಂಡು ದಿನಕರನ ಕಾಯಿಲೆಯ ಬಗ್ಗೆ ಹೇಳಿ– ಅವನ ಹೇಳಿಕೆಯಂತೆ ಅವನ ಮನೆಯಲ್ಲಿಯೇ ರುದ್ರಾಭಿಷೇಕ ಮಾಡಿಸಿ ದಿನಕರನಿಗೆ ಒಂದು ಯಂತ್ರ ತಂದು ಕಟ್ಟಿದರು. ಜಂಗ್ಲಿ ಮಹಾರಾಜನಿಗೆ ಹರಕೆ ಹೊತ್ತರು. ಸಾಯಿಬಾಬಾನ ಅಂಗಾರ ತರಿಸಿ ದಿನಕರನಿಗೆ ಲೇಪಿಸಿದರು.

ದಿನಕರನ ಎಲ್ಲ ಉಪಚಾರಕ್ಕೆ ಕೃಷ್ಣೆಯೇ ನಿಂತಳು; ಕಮಲೆ ಅವಳಿಗೆ ನೆರವಾದಳು ಮಾತ್ರ. ದಿನಕರನ ಜ್ವರ ಒಂದು ವಾರದ ನಂತರ ಕ್ರಮವಾಗಿ ಇಳಿದು ನಿಲುಗಡೆಗೆ ಬಂತು. ಬಹಳ ಇಳಿದುಹೋಗಿದ್ದ. ಅವನಿಗೆ ಒಂದಿಷ್ಟೂ ಆಯಾಸವಾಗದಂತೆ ಕೃಷ್ಣೆ ಕುಳಿತಲ್ಲೇ ಕುಳಿತು ನೋಡಿಕೊಂಡಳು.

ದಿನಕರನಿಗೆ ತಮ್ಮ ಹರಕೆ–ಹಸಾದಗಳಿಂದಲೇ ಗುಣವಾಯಿತೆಂದು ತಿಳಿದ ಸೀತಾರಾಮರಾಯರು ' ಇನ್ನೇನೂ ಚಿಂತೆಯಿಲ್ಲ'ವೆಂದು ಹೇಳಿ ತಾವು ಪ್ರಭೆಯನ್ನು ಕರೆದುಕೊಂಡು ಹೋಗುವದಕ್ಕೆ ಅನುಮತಿ ಬೇಡಿದರು. ದಿನಕರ "ನಾನೂ ಬರುತ್ತೇನೆ " ಎಂದ. " ಛೇ–ಕೂಡದು. ನೀವು ಇನ್ನೊಂದೆರಡು ವಾರ ಪೂರ್ಣ ವಿಶ್ರಾಂತಿ ಪಡೆದು ಬರಬೇಕು—ನಾನು ಕಲೆಕ್ಟರನನ್ನು ಕಂಡು ನಿಮ್ಮ ರಜಾ ಬೆಳೆಸುವ ಬಗ್ಗೆ ಯತ್ನಿಸುತ್ತೇನೆ. ಬರುವ ವಾರ ಶ್ರೀ. ಫಡಕೆ ಬರುತ್ತಾರಂತೆ. ಕೊಲ್ಲಾಪುರಕ್ಕೆ ಪ್ರಭೆಯನ್ನಿಳಿಸಿ ಹೋಗುತ್ತೇನೆ. ನೀವು ಬಂದಮೇಲೆ ಅವರನ್ನು ಒಮ್ಮೆ ಹರಿಹರದಿಂದ ಕರೆಸೋಣ—ಅದಿರಲಿ; ನೀವು ಅದನ್ನೆಲ್ಲಾ ತಲೆಯಲ್ಲಿ ತುಂಬಿಕೊಳ್ಳಬೇಡಿ. " ಎಂದು ಹೇಳಿದರು.

ಪ್ರಭಾ ಕಮಲೆಯನ್ನು ಬಿಟ್ಟು ಹೋಗಬೇಕಲ್ಲಾ—ಎಂದು ಚಿಂತಿಸಿ, " ಮಾವಾ, ಹೋಗುವಾಗ ಕೊಲ್ಲಾಪುರಕ್ಕೆ ಬಂದು ಹೋಗಿರಿ. ನಾನು ನಿಮ್ಮ ಗಾಡಿ ಬರುವಾಗ ಮಿರಜಿಗೆ ಕರೆಯಬರುತ್ತೇನೆ " ಎಂದು ಹೇಳಿ, ಕೃಷ್ಣೆಗೆ " ಅತ್ತಿಗೆ ನೀನೂ ಬರುವಿಯಷ್ಟೆ " ಎಂದು ಕೇಳಿದಳು.

" ಆಗಲಿ ಪ್ರಭಾ, ನಿನ್ನ ಮದುವೆಗಂತೂ ನನ್ನನ್ನು ಕರೆಸುವೆಯಷ್ಟೆ " ಎಂದು ನಗೆಯಾಡಿದಳು. ಪ್ರಭಾ ಕೃಷ್ಣೆಯನ್ನಪ್ಪಿಕೊಂಡು " ನನ್ನನ್ನು ಮರೆಯಬೇಡ ಅತ್ತಿಗೆ " ಎಂದಳು.

" ನಿನ್ನನ್ನು ಹೇಗೆ ಮರೆತೇನು ಪ್ರಭಾ, ನಿನಗೆ ಮಂಗಳವಾಗಲಿ " ಎಂದು ಬೀಳ್ಕೊಟ್ಟಳು. ಸೀತಾರಾಮರಾಯರು " ನಿಮ್ಮ ಅವಿರತ ಸೇವೆಯಿಂದ ದಿನಕರರಾಯರ ಜೀವದಾನ ಮಾಡಿದಿರಿ, ಕೃಷ್ಣಾಬಾಯಿ " ಎಂದು ಕೊಂಡಾಡಿದರು.

## ೨೭

ಒಂದು ದಿನ ಹಣ್ಣಿನ ರಸ ಕುಡಿಸಿ ಕೃಷ್ಣೆ ಬಾಯೊರಸುವಾಗ ದಿನಕರ ಅವಳ ಕೈ ಹಿಡಿದು, " ನನ್ನ ಕೃಷ್ಣಾ " ಎಂದ.

" ಏನು ದಿನೂ "

ದಿನಕರ ಮೆಲ್ಲನೆ ಅವಳ ಕೈಬಿಟ್ಟು ಆಯಾಸಗೊಂಡವನಂತೆ ಬಿದ್ದು ಕೊಂಡ. ಕೃಷ್ಣೆ ಅವನ ಎರಡೂ ಕೈಗಳನ್ನೆತ್ತಿಕೊಂಡು ಅವ್ರಗಳ ಮೇಲೆ ತನ್ನ ಬೆರಳಾಡಿಸುತ್ತ ಅಂದಳು :

" ಆಯಾಸ ಮಾಡಿಕೊಳ್ಳಬೇಡ ದಿನಕರ "

" ಕೃಷ್ಣಾ "

" ದಿನೂ "

" ನಾನೊಂದು ಮಾತು ಕೇಳಲೇ ? "

" ಒಂದಲ್ಲ; ಹತ್ತು ಮಾತು ಕೇಳುವಿಯಂತೆ; ಮೊದಲು ನಿನಗೆ ಪೂರ್ಣ ಗುಣವಾಗಲಿ. "

" ಇಲ್ಲ; ಈಗ ಕೇಳಬೇಕು. "

" ನಾನೇನು ಹೇಳಲಿ ದಿನಕರ—ನನ್ನನ್ನು ಏನು ಕೇಳಿದರೂ ಚಿಂತೆ ಯಿಲ್ಲ. ಆದರೆ ಕಮಲೆ ಇಲ್ಲಿದ್ದಾಳೆಂದು ತಿಳಿದು ಕೇಳು "

" ಎಲ್ಲಿದ್ದಾಳೆ ಕಮಲೆ ? " ದಿನಕರ ಗಾಬರಿಗೊಂಡು ಕೇಳಿದ.

" ಇಲ್ಲಿ; ನನ್ನ ಎದೆಯ ಗೂಡಿನಲ್ಲಿ ನಿನ್ನ ಜತೆ ಮನೆ ಮಾಡಿದ್ದಾಳೆ. "

" ಅದಲ್ಲ—ಕೃಷ್ಣಾ, ನಾ ಕೇಳುವದು. "

" ಮತ್ತೇನು ? "

" ಚಂದ್ರಕಾಂತನಿಗೆ ನನ್ನ ಬಗ್ಗೆ ಏನು ಹೇಳಿರುವಿ ? "

" ....ಅದು ನನ್ನ ಸ್ವಂತ ವಿಷಯ "

" ನನ್ನ ಬಗ್ಗೆ ಅವನು ಏನೆಂದು ತಿಳಿದುಕೊಂಡಿದ್ದಾನೋ ! "

" ಅದೂ ನನ್ನ ಸ್ವಂತ ಹೊಣೆಗಾರಿಕೆ—ದಿನಕರ.

" ಇಷ್ಟು ನಿಷ್ಠುರವೇಕೆ ಕೃಷ್ಣಾ ? "

" ನಿಷ್ಠುರವೇನು ಬಂತು ದಿನಕರ ? ನೀನು ಅದರ ಬಗ್ಗೆ ಯಾಕೆ ತಲೆ ಕೆಡಿಸಿಕೊಳ್ಳುತ್ತೀ "

" ನನಗೆ ಸಮಾಧಾನವಾಗುವಂತೆ ಹೇಳು. "

" ದಿನಕರ, ನಿನ್ನ ಜ್ವರದ ಕಾರಣ ನನಗೆ ತಿಳಿದಿತ್ತು. ಆದರೆ ಅದು ಈಗ ಸ್ವಲ್ಪ ಬೇರೆಯಾಗಿ ಕಾಣುತ್ತಿದೆ. ನೀನಿನ್ನೂ ಶುದ್ಧ ಮಗುವಿನಂತೆ ಮಾಡು ತ್ತೀಯಲ್ಲ ದಿನೂ. "

" ಯಾಕೆ ಕೃಷ್ಣಾ ?"

" ಯಾಕೆ ನಿನಗೆ ಈ ಅಸಮಾಧಾನ ?"

" ಚಂದ್ರಕಾಂತ ಏನು ತಿಳಿದುಕೊಂಡನೋ—ಮತ್ತೆ ಕಂಡರೇನೆನ್ನು ವನೋ !"

ಕೃಷ್ಣೆ ಅಳುತ್ತಿದ್ದಳು—ಮತ್ತೆ ದಿನಕರನೆಂದ:

" ನಿನ್ನನ್ನು ಕಂಡರೆ ಅವನಿಗೆ ಹೇಗೆ ಕೃಷ್ಣಾ?"

" ಅದೆಲ್ಲ ಯಾಕೆ ದಿಕನರ ನಿನಗೆ ?"

" ನಾನು ಕೇಳಬಾರದೆ ಕೃಷ್ಣಾ, ನನ್ನಿಂದ ನಿನಗೇನಾಗಿದೆಯೋ ಎಂದು ಚಿಂತಿಸಬಾರದೇ ಕೃಷ್ಣಾ, ನಾನು ?"

" ಇನ್ನೊಬ್ಬರಿಂದ ನನಗ್ಏನೂ ಆಗುವಂತಿಲ್ಲ—ದಿನೂ. ನನ್ನಿಂದಲೇ ನನಗೇನಾದರೂ ಆದರೆ ಆಗಬೇಕು. ಇನ್ನೊಬ್ಬರಿಗೂ ನನ್ನಿಂದಲೇ ಏನಾದರೂ ಆದರೆ ಉಪಾಯವಿಲ್ಲ."

" ನಾನು ನಿನಗೆ ಇನ್ನೊಬ್ಬನಾದೆನೇ ಕೃಷ್ಣಾ ? ನಾನು ನಿನಗೆ ಏನೂ ಅಲ್ಲವೇ ?"

" ಮತ್ತೆ ಅದೇ ಮೂರ್ಖತನ ! ಅಲ್ಲ ದಿನಕರ, ನನ್ನನ್ನು ಗುರುತಿಸಿ ಮಾತಾಡಿಸಲಿಕ್ಕೂ ನಿನಗೆ ಧೈರ್ಯವಾಗಲಿಲ್ಲ. ಈಗ ಮಾತ್ರ ಹೀಗೆ ಕೇಳುತ್ತೀ."

" ಕ್ಷಮಿಸು ಕೃಷ್ಣಾ."

" ಕ್ಷಮೆಯೇನು ? ನಿನ್ನ ಮೇಲೆ ಸಿಟ್ಟುಮಾಡಿ ನಾನು ಯಾವ ಪಾಪಕ್ಕೆ ಗುರಿಯಾಗಲಿ ? ನಿನಗೆ ಬುದ್ಧಿ ಎಂದು ಬರಬೇಕು ದಿನಕರ ? ಅವರು ಹೋಗುವಾಗ ನಿನಗೇನು ಹೇಳಿದರು ? ಅದರಿಂದ ಅವರು ನಿನ್ನ ಬಗ್ಗೆ ಏನು ತಿಳಿದಿರಬಹುದೆಂದು ನಿನಗೆ ತಿಳಿಯಬಾರದೇ ?"

" ಹೌದು; ಅವನು ಹಾಗೆ ಹೇಳಿದನೆಂದೇ ನಿನ್ನನ್ನು ಕೇಳಿದೆ."

" ಅವರು ಹಾಗೆ ಹೇಳಿದಮೇಲಾದರೂ ಇನ್ನೇನೂ ಕೇಳಬೇಕಾಗಿಲ್ಲ ವೆಂದು ನಿನಗೆ ತಿಳಿಯಬೇಡವೇ—ದಿನಕರ ?"

" ನನ್ನಲ್ಲಿ ನಿನಗೆ ಸಂಕೋಚವೇ, ಕೃಷ್ಣಾ ?"

" ಸಂಕೋಚವೇನು ದಿನೂ ಕೆಲವು ಮಾತು ಆಡಬೇಕಾಗುತ್ತದೆ; ಕೆಲ ವನ್ನು ಆಡದೆ ತಿಳಿದುಕೊಳ್ಳಬೇಕಾಗುತ್ತದೆ."

" ಸಾಕು ನಿನ್ನ ಉಪದೇಶ " ಎಂದವಳ ಕೈ ಕೊಸರಿ—

" ಹೇಳು ಕೃಷ್ಣಾ, ಕಮಲೆಗೆ ನಾನು ನಿನ್ನ ಬಗ್ಗೆ ಏನು ಹೇಳಿರುವೆನೆಂದು ತಿಳಿದಿರುವಿ ? ಆಡದೆ ತಿಳಿದುಕೊಳ್ಳುವವಳು ನೀನು ! ಹೇಳು ಮತ್ತೆ" ಎನ್ನುತ್ತ ತನ್ನ ಕೈ ಕಟ್ಟಿಕೊಂಡು ಕುಳಿತ.

" ಎಂಥ ಹುಚ್ಚ ನೀನು ದಿನೂ—ಅವಳಿಗೆ ನನ್ನ ಹೆಸರನ್ನೂ ತಿಳಿಸಲು ನಿನಗೆ ಧೈರ್ಯವಿಲ್ಲವೆಂದು ನನಗೆ ತಿಳಿಯದೇ ? ಅದೂ ಹುಚ್ಚು ಹುಡುಗಿ."

" ಯಾಕೆ ?"

" ಯಾಕೆಯೇನು ? ನಿನ್ನನ್ನು ಹೀಗೆ ನನ್ನ ವಶಕ್ಕೆ ಕೊಡಬಹುದೇ?"

" ಏನಾಯಿತು ?"

" ಏನಾಗಬೇಕು ? ನಿನ್ನ ಬುದ್ಧಿಯು ಸ್ವಾಧೀನ ತಪ್ಪಿತು. ಅಲ್ಲ—ದಿನೂ, ಒಂದು ಮಾತಿಗೆ ನಿಮ್ಮಿಬ್ಬರ ದುರ್ಬಲ ಪ್ರವೃತ್ತಿ ಒಳ್ಳೆಯದು; ಇನ್ನೊಂದು ಮಾತಿಗೆ ಇದೇ ನಿಮಗೆಲ್ಲಿ ಮುಳುಗುವದೋ—ಎಂದೇ ನನ್ನ ಚಿಂತೆ."

" ಒಗಟವಾಗಿ ಹೇಳುವಿಯಲ್ಲ--ಕೃಷ್ಣಾ."

" ಹೂಂ; ಬಿಚ್ಚಿಯೇ ಆಡುತ್ತೇನೆ, ಹೇಳು—ಕಮಲೆಯ ವಿಶ್ವಾಸಕ್ಕೆ ನೀನು ಪಾತ್ರನೆಂದು ಹೇಳುವಿಯಾ ?"

" ಅದರಲ್ಲಿ ಅನುಮಾನವೇನು ?"

" ಆತ್ಮವಂಚನೆ ಮಾಡಿಕೊಳ್ಳಬೇಡ ದಿನಕರ, ನನ್ನ ಚಿಂತೆ ಹಿಡಿದು ನೀನವಳಿಗೆ ಒಳ್ಳೆಯದನ್ನು ಮಾಡಿಲ್ಲ."

" ನಾನವಳಿಗೇನನ್ನೂ ಕಡಿಮೆ ಮಾಡಿಲ್ಲ."

" ಹೌದು; ನಿನಗೇ ಇಲ್ಲದ ಧೈರ್ಯ, ಸಮಾಧಾನ ಅವಳಿಗೆಲ್ಲಿಂದ ಕೊಟ್ಟೀ ನೀನು ? "

" ಧೈರ್ಯದ ಪ್ರಶ್ನೆಯೇಕೆ ? "

" ಮತ್ತೆ ಅಡ್ಡ ಮಾತಾಡಿ ನನ್ನನ್ನು ಕೆಣಕಬೇಡ—ದಿನಕರ. ಸುಮ್ಮನೇ ಮಲಗಿಕೋ. ನೀನು ಈಗ ಏನನ್ನೂ ತಡೆದುಕೊಳ್ಳಲಾರಿ. " ಎಂದವನ ಹಣೆ ಸವರಿದಳು.

ಹಾಗೇ ಅವಳ ಕೈ ಹಿಡಿದುಕೊಂಡು ದಿನಕರ " ಕೃಷ್ಣಾ " ಎಂದ.

" ನಿನ್ನ ದುರ್ಬಲತೆಯನ್ನು ನಾನು ಬಲ್ಲೆ, ದಿನಕರ. ನಿನ್ನ ಮನಸ್ಸಿನಲ್ಲಿ

ನನ್ನನ್ನು ಭೂತವನ್ನಾಗಿ ಮಾಡಿ ಪೂಜಿಸಬೇಡ. ನನ್ನಲ್ಲಿ ಮತ್ತೇನೂ ಇಲ್ಲವೇ ದಿನಕರ ?"

"ಅಂದರೇನು ಕೃಷ್ಣಾ ?"

"ಛೀ–ಛೀ ದಿನೂ, ನನ್ನ ತಲೆಯನ್ನೂ ನೀನು ಕಾಯಿಸಬಲ್ಲಿ ನೋಡು."

"ಇಲ್ಲ—ಕೃಷ್ಣಾ"

"ಹೇಳು ದಿನಕರ, ನಿನ್ನ ಮಾತನ್ನೇ ಕೇಳುತ್ತೇನೆ—ನನ್ನ ಕೂಡ ನೀನು ಮುಂಚಿನಂತೆಯೇ ಇರಬಲ್ಲೆಯಾ ?"

"ನೀನೇನೆನ್ನುತ್ತೀ."

"ಅದೇ—ನಿನಗೆ ಸ್ವಂತ ಬುದ್ಧಿಯಿಲ್ಲವೆಂದದ್ದು. ನನ್ನನ್ನು ನೆಚ್ಚಿದ ಕಮಲೆಗೆ ನಾನು ಮೋಸ ಮಾಡಲಾರೆ. ನೀನು ಅವಳನ್ನು ಇಷ್ಟು ಮಾತ್ರ ಮೆಚ್ಚಿದ್ದಲ್ಲವೇ ?"

"ನನ್ನನ್ನೂ ಕೆಣಕುತ್ತಿರುವಿ ನೀನು. ನಾನು ಕಮಲೆಗೇನನ್ನೂ ಕಡಿಮೆ ಮಾಡಿಲ್ಲ. ನೀನು ಚಂದ್ರಕಾಂತನಿಗೆ ದ್ರೋಹ ಬಗೆಯುತ್ತೀಯಾ ?"

"ಬೇಡ ದಿನಕರ, ಇಂಥ ಮಾತುಗಳಿಗೆ ನನ್ನಿಂದ ಎದುರಾಗಿ ಬರುವ ಉತ್ತರವನ್ನು ನೀನು ದಕ್ಕಿಸಿಕೊಳ್ಳಲಾರಿ. ಮತ್ತೆ ಇಂಥ ಮಾತು ನನ್ನ ದುರ್ಬುದ್ಧಿಗೆ ಆಹ್ವಾನವಾಗಿ ಬಂದಾವು."

"ಕೃಷ್ಣಾ" ದಿನಕರನ ಕಣ್ಣು ತುಂಬಿ ಬಂತು.

"ಅಳಬೇಡ ದಿನೂ, ಸುಮ್ಮನೆ ನನ್ನನ್ನೂ ಹಿಂಸಿಸುತ್ತೀ. ನೀವಿಬ್ಬರೂ ನಿಮ್ಮ ನಿಮ್ಮ ಸ್ವಭಾವದಿಂದ ಮನಸ್ಸಿನಲ್ಲಿ ಹಣ್ಣಾಗುತ್ತೀರಿ. ನಮ್ಮದೂ ಒಂದು ರೀತಿ; ಅದು ನಿಮ್ಮಿಂದ ತೀರ ಭಿನ್ನ. ಅವರೂ ನನ್ನನ್ನು ಆಳಬೇಕೆನ್ನುತ್ತಾರೆ; ನಾನೂ ಅದೇ ಸ್ವಭಾವದವಳು. ಅದೇ ವಿರಸದಿಂದ ನನ್ನ ತಲೆ ತೀವ್ರ ವೇದನೆಗೊಳಗಾಗುತ್ತದೆ. ನೀನು ಮನಸ್ಸಿನ ಕುದಿ ಸಹಿಸಲಾರದೆ ಹೀಗೆ ಜ್ವರದಿಂದ ಹಣ್ಣಾದಿ. ನನ್ನದು—ನಿನಗೆ ಗೊತ್ತಿಲ್ಲ—ತಡೆಯಲಾರದಾದರೆ ನನಗೆ ಹುಚ್ಚೇ ಗತಿ ! ನನ್ನನ್ನು ಇನ್ನು ಎಂದೂ ಹೀಗೆ ಕೆಣಕಬೇಡ ದಿನಕರ. ಅಂದಿನ ನನ್ನ ದಿನಕರ ಇಂದು ನನ್ನ ಕಮಲೆಯ ಪತಿ. ನನ್ನ ಬಗ್ಗೆ ಹುಚ್ಚು ಹವ್ಯಾಸ ಬಿಟ್ಟು ಬಿಡು. ಅವರು ನನ್ನನ್ನಾಳದೆ ಹೋದರು. ನೀನು ಇಂಥವನೆಂದು ಅವರೇನು ಬಲ್ಲರು ?"

" ನಾನೆಂಥವನು ? "

" ಆಳುವ ಮಾತಿಗೆ ಹೇಳಿದೆ, ದಿನಕರ. "

" ಆಳುವ ಮಾತಿರಲಿ—ಕೃಷ್ಣಾ " ಎಂದು ಮತ್ತೆ ಅವಳ ಕೈ ಹಿಡಿದು ಕೊಂಡ.

ಬಾಗಿಲ ಕಡೆಗೆ ನೋಡಿದ ಕೃಷ್ಣೆ ಕಮಲೆಯನ್ನು ಕಂಡಳು. ಅವಳು ನಿಂತಲ್ಲೆ ನಿಂತು ಸಪ್ಪಳಿಲ್ಲದೆ ಅಳುತ್ತಿದ್ದಾಳೆ. ಯಾವಾಗ ಬಂದು ನಿಂತಿರು ವಳೋ ಅವರಿಗೆ ತಿಳಿಯದು.

" ಬಾ, ಕಮಲ " ಕೃಷ್ಣಾ ಕರೆದಳು.

ಕಮಲೆ ನಿಂತೇ ಇದ್ದವಳು ಕುಸಿದು ಬಿದ್ದು ಅಳಹತ್ತಿದಳು.

ದಿನಕರ ಕೃಷ್ಣೆಯ ಕೈ ಯಾವಾಗಲೋ ಬಿಟ್ಟಿದ್ದ.

ಕೃಷ್ಣಾ ಇಳಿದು ಬಂದು ಕಮಲೆಯನ್ನೆತ್ತಿ ಅಪ್ಪಿಕೊಂಡು ಸಂತಯಿಸುತ್ತ—

" ನೀನು ನಿಂತದ್ದು ಒಳ್ಳೆಯದೇ ಆಯಿತು, ಕಮಲ " ಎಂದಳು.

ತನ್ನ ಎರಡೂ ಕೈಗಳನ್ನು ಮಾಲೆಯಂತೆ ಕೃಷ್ಣೆಗೆ ತೊಡಿಸುತ್ತ ಕಮಲೆ " ಅತ್ತಿಗೆ " ಎಂದು ಬಿಕ್ಕಳಿಸಿದರು.

ತನ್ನ ಎದೆಗೆ ಅವಳ ಮುಖವನ್ನು ಒತ್ತಿಕೊಳ್ಳುತ್ತ ಕೃಷ್ಣಾ—" ನನ್ನ ಕಮಲ " ಎಂದಳು.

ದಿನಕರ ಗಾಬರಿಗೊಂಡು ಎದ್ದು ನಿಂತಿದ್ದ.

ಕೃಷ್ಣೆ ಅವನನ್ನು ನೋಡಿ—" ನೀನು ಸುಮ್ಮನೆ ಮಲಗು ದಿನಕರ. "

ದಿನಕರ ನಿಂತಲ್ಲಿಯೇ ಹೇಳಿದ :

" ಕೃಷ್ಣಾ, ಕಮಲೆಗೆ ಎಲ್ಲಾ ಹೇಳಿಬಿಡುತ್ತೇನೆ. "

" ಅವಳಿಗೆಲ್ಲಾ ತಿಳಿದಿದೆ, ದಿನಕರ. "

" ನಾನಿನ್ನು ಅವಳನ್ನು ನನ್ನ ಹುಚ್ಚಿನಿಂದ ವಂಚಿಸುವದಿಲ್ಲವೆಂದು ಹೇಳು ಕೃಷ್ಣಾ "

" ಹೆಣ್ಣಿಗೆ ಅದನ್ನೆಲ್ಲಾ ಹೇಳಬೇಕಾಗುವದಿಲ್ಲ, ದಿನೂ. "

" ಕ್ಷಮಿಸುವಿಯಾ ಕಮಲ ? " ದಿನಕರ ಮುಂದೆ ಬಂದ.

ಕೃಷ್ಣೆ ಕಮಲೆಯನ್ನವನಿಗೆ ಒಪ್ಪಿಸಿ ಹೊರಕ್ಕೆ ಹೋದಳು.



# ಲಲಿತ ಸಾಹಿತ್ಯಮಾಲೆ, ಧಾರವಾಡ

ವರುಷಕ್ಕೆ ಆರುನೂರು ಪುಟದ ಸಾಹಿತ್ಯ

**ವಾರ್ಷಿಕ ಚಂದಾ ಅಂಚೆ ಸೇರಿ ಆರು ರೂ.**

## — ಈಗ ದೊರೆಯುವ ಪ್ರಕಟನೆಗಳು —

| | | |
|---|---|---|
| ಮುದ್ದಿನ ಕಣಿ (ಚೆಕ್ಹೊವ್‌ನ ಕಥೆಗಳು) | ಚುಳಕಿ | ೧ ೦ ೦ |
| ಸುಮತಿ-ಅನುರಾಧಾ (ನೀಳ್ಗತೆಗಳು) | ಶರಚ್ಚಂದ್ರ | ೧ ೪ ೦ |
| ಪುರುಷಾರ್ಥ ,, | ಶ್ರೀರಂಗ | ೨ ೦ ೦ |
| ಪ್ರತಿ ಸರಕಾರ ,, | ಮಿರ್ಜಿ ಅಣ್ಣಾರಾಯ | ೧ ೧೨ ೦ |
| ಸ್ಮಶಾನ ವೈರಾಗ್ಯ (ಟಾಲ್‌ಸ್ಟಾಯ್) | ಚುಳಕಿ | ೧ ೮ ೦ |
| ಮದಗಜಮಲ್ಲ (ವೀರಕಥೆಗಳು) | ದೇ. ಪಾಂಡುರಂಗರಾವ್ | ೧ ೦ ೦ |
| ಪರಿವರ್ತನೆ (ಕಾದಂಬರಿ) | ನಿಶಾಕಾಂತ | ೨ ೮ ೦ |
| ಸ್ವಪ್ನಜೀವಿ ,, | ತ್ರಿವಿಕ್ರಮ | ೧ ೮ ೦ |
| ಜೀವನ ಪಾಠಗಳು(ಪತ್ರ-ಪ್ರಬಂಧಗಳು) | ಪ್ರಿ. ಗೋಕಾಕ | ೧ ೦ ೦ |
| ದೋರಾ-ಇತರ ಕಥೆಗಳು (ಅನುವಾದ) | ಗೋ. ವೆಂ. ಚುಳಕಿ | ೧ ೦ ೦ |
| ಚಿರವಿರಹಿ (ಕಾದಂಬರಿ) | ಬೆಳ್ಳೆ ರಾಮಚಂದ್ರರಾವ್ | ೪ ೦ ೦ |
| ಹಾಸು-ಹೊಕ್ಕು (ಸಂ-ಕಥನಗಳು) | ದತ್ತಾತ್ರೇಯ | ೧ ೪ ೦ |
| ಮುಳ್ಳುಬೇಲಿ (ಕಾದಂಬರಿ) | ಅನು : ಚಾಲುಕ್ಯ | ೨ ೦ ೦ |
| ಉಪಾಯ ವೇದಾಂತ (ಹರಟೆಗಳು) | ನಾ. ಕಸ್ತೂರಿ | ೧ ೧೨ ೦ |
| ರಕ್ತದ ರೂಪಾಯಿ (ಕಾದಂಬರಿ) | ಸೇ. ನಮಿರಾಜ ಮಲ್ಲ | ೧ ೮ ೦ |
| ಸರದಾರ ವಲ್ಲಭಭಾಯಿ (ಚರಿತ್ರೆ) | ಸಿದ್ದವನಹಳ್ಳಿ ಕೃಷ್ಣಶರ್ಮ | ೧ ೮ ೦ |
| ರಾಜಾ ಪುರೂರವ (ಅನುವಾದ) | ಗೋ. ವೆಂ. ಚುಳಕಿ | ೧ ೮ ೦ |
| ಪರಿಹಾರ (ಕಾದಂಬರಿ) | ದತ್ತಾತ್ರೇಯ | ೨-೦-೦ |

ಎಲ್ಲ ಪ್ರಕಟನೆಗಳ ಉತ್ತಮ (ಲೈಬ್ರರಿ) ಪ್ರತಿಗೆ ಒಂದೊಂದು ರೂಪಾಯಿ ಹೆಚ್ಚು. ಎಲ್ಲ ಪ್ರಕಟನೆಗಳನ್ನು ಒಮ್ಮೆಲೆ ಕೊಳ್ಳುವವರಿಗೆ ಅಂಚೆಯ ವೆಚ್ಚ ಉಚಿತ.